# ಅಚಲ

ಬಿಡಿಪ್ರತಿ : 4 ರೂ.

ತಿಂಗಳ ಪತ್ರಿಕೆ

ಫೆಬ್ರವರಿ - 2006

## ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು

# ಅಚಲ

ಸಂಪುಟ - 21 ಸಂಚಿಕೆ : 2

*ಸಂಪಾದಕ ಮಂಡಳಿ*

ಎಸ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾ ನಾಗರಾಜ್
ಹೆಚ್. ಎಸ್. ಗೀತಾ
ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು.
ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.
ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by**
**Dr. N. Gayathri**

**Published by**
**Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


## ಪ್ರೀತಿಯ ಚಂದಾದಾರರೇ,

ಇಪ್ಪತ್ತೊಂದನೆಯ ವರ್ಷಕ್ಕೆ ಕಾಲಿಟ್ಟಿರುವ 'ಅಚಲ' ಓದುಗರ, ಚಂದಾದಾರರ, ಬರಹಗಾರರ ಬೆಂಬಲವನ್ನು ಬಹಳವಾಗಿ ಅಪೇಕ್ಷಿಸುತ್ತದೆ. ಇಲ್ಲಿಯವರೆಗೆ ನಿಮ್ಮ ಲೇಖನಗಳ ಮೂಲಕ ಚಂದಾ ಮತ್ತು ಆರ್ಥಿಕ ನೆರವಿನ ಮೂಲಕ ನಮ್ಮನ್ನು ಪ್ರೋತ್ಸಾಹಿಸಿದ್ದೀರಿ. ನಿಮ್ಮೆಲ್ಲರ ಪ್ರೋತ್ಸಾಹದಿಂದ ಅಚಲ ಬೆಳೆಯಬೇಕಿದೆ. ನಿಮ್ಮ ಚಂದಾ ಮುಗಿದ ನಂತರ ದಯವಿಟ್ಟು ನವೀಕರಿಸಿ. ನಿಮ್ಮ ಆತ್ಮೀಯರಿಗೆ, ಸ್ನೇಹಿತರಿಗೆ ಚಂದಾ ಮಾಡಿಸಿ ಅಚಲದ ಬಳಗವನ್ನು ವಿಸ್ತರಿಸಿ.


ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಸಂಪಾದಕೀಯ

## ಕೌಟುಂಬಿಕ ಹಿಂಸೆಯ ಪರಿಹಾರದತ್ತ ಹೊಸ ಕಾನೂನು

ಕೌಟುಂಬಿಕ ಹಿಂಸೆಯಿಂದ ಮಹಿಳೆಯರನ್ನು ರಕ್ಷಿಸುವತ್ತ ಕಾನೂನನ್ನು ಮಾರ್ಪಡಿಸಲು ಮತ್ತು ಬಲಪಡಿಸಲು ಕಳೆದ ಮೂರು ದಶಕಗಳಿಂದ ಮಹಿಳಾ ಚಳುವಳಿ ಅವಿರತವಾಗಿ ಹೋರಾಟ ನಡೆಸುತ್ತಲೇ ಬಂದಿದೆ. 1983ರಲ್ಲಿ ಜಾರಿಗೆ ಬಂದ ಕೌಟುಂಬಿಕ ಹಿಂಸೆಯ ವಿರೋಧಿ ಕಾನೂನುಗಳು ವರದಕ್ಷಿಣೆ ಮತ್ತು ಅತ್ಯಾಚಾರದಂತಹ ಸಮಸ್ಯೆಗಳನ್ನು ನಿವಾರಿಸುವತ್ತ ದೃಷ್ಟಿ ಹರಿಸಿದವಲ್ಲದೆ, ಮನೆಯೊಳಗೆ ನಡೆಯುವ 'ಖಾಸಗಿ' ಹಿಂಸೆಯನ್ನು 'ಸಾರ್ವಜನಿಕ' ಗೊಳಿಸುವ ನಿಟ್ಟಿನಲ್ಲಿ ಯಶಸ್ವಿಯಾದವು. ಈ ಸಂಬಂಧವಾಗಿ ಸೆಕ್ಷನ್ 498A, IPC ಹಲವಾರು ಕಾನೂನಿನ ಸುಧಾರಣೆಗಳೊಂದಿಗೆ ಮೂಡಿ ಬರುವಂತಾಯಿತು. ಈ ಸುಧಾರಣೆಯೂ ಕೂಡ ಕೌಟುಂಬಿಕ ಹಿಂಸೆಯ ಎಲ್ಲ ಮುಖಗಳನ್ನೂ ಗಮನಿಸುವುದಿಲ್ಲ. ಮಹಿಳೆಗೆ ಹಿಂಸೆ ಕೊಡುವ ವ್ಯಕ್ತಿಗಳಾಗಿ ಗಂಡ ಮತ್ತು ಅವನ ಕುಟುಂಬದವರನ್ನು ಮಾತ್ರ ಗುರುತಿಸುತ್ತದೆ. ಅಷ್ಟೇ ಅಲ್ಲ, ಈ ಕಾನೂನಿನಡಿಯಲ್ಲಿ ರಕ್ಷಣೆ ಕೇಳಲು ಹೊರಟ ಮಹಿಳೆಯರನ್ನು ಸಾಮಾನ್ಯವಾಗಿ ಮನೆಯಿಂದ ಹೊರಗೆ ಹಾಕಲಾಗುತ್ತದೆ, ಇಲ್ಲವೆ ವಿಶೇಷವಾಗಿ ಕಿರುಕುಳ ಕೊಟ್ಟು ಅವರು ಕೋರ್ಟು, ಕಛೇರಿಗಳಿಗೆ ಅಲೆಯುವಂತೆ ಮಾಡಿ ಬದುಕು ದುಸ್ತರವೆನಿಸುವಂತೆ ಮಾಡಲಾಗುತ್ತದೆ. ಈ ಎಲ್ಲ ಕುಂದು ಕೊರತೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮಹಿಳಾ ಸಂಘಟನೆಗಳು ಕೌಟುಂಬಿಕ ಹಿಂಸೆಯ ವಿರುದ್ಧದ 'ಸಿವಿಲ್' ಕಾನೂನಿಗಾಗಿ ಹೋರಾಟ ನಡೆಸುತ್ತಲೇ ಬಂದಿವೆ.

1990ರಿಂದ ಕೌಟುಂಬಿಕ ಹಿಂಸೆಯನ್ನು ತಡೆಗಟ್ಟಲು ಕರಡು ಮಸೂದೆಗಳು ರಚಿತವಾಗಿದ್ದು ಅಂದಿನಿಂದ ಅಧಿಕಾರಕ್ಕೆ ಬಂದ ಎಲ್ಲ ಕೇಂದ್ರ ಸರ್ಕಾರಗಳನ್ನು ಮಹಿಳಾ ಸಂಘಟನೆಗಳು ಕಾನೂನಿನ ಜಾರಿಗಾಗಿ ಒತ್ತಾಯಿಸುತ್ತಲೇ ಬಂದಿವೆ. ಕಳೆದ ವರ್ಷಗಳಲ್ಲಿ ಮಹಿಳಾ ಸಂಘಟನೆಗಳ ಒತ್ತಾಯದ ಮೇರೆಗೆ ಎನ್‌ಡಿಎ ಸರ್ಕಾರವು ಅಂತೂ ಕೊನೆಗೆ ಮಸೂದೆಯನ್ನು ಚರ್ಚೆಗಾಗಿ ಮಂಡಿಸಿತು. ಆದರೆ ಈ ಮಸೂದೆಯು ಕೂಡ ಕೌಟುಂಬಿಕ ಹಿಂಸೆಯ ನಿವಾರಣೆಗಿಂತ ಅದನ್ನು ಕಾನೂನುಬದ್ಧಗೊಳಿಸುವ ಧೋರಣೆಯನ್ನು ವ್ಯಕ್ತಪಡಿಸಿತ್ತು ಮತ್ತು ಸೆಕ್ಷನ್ 498-ಎ (ಐಪಿಸಿ) ಯನ್ನು ಸಡಿಲಗೊಳಿಸುವಂತೆ ರೂಪಿಸಲಾಗಿತ್ತು. ದುರದೃಷ್ಟಕರವೆಂದರೆ ಪಾರ್ಲಿಮೆಂಟರಿ ಸಮಿತಿಯ ಈ ಸಲಹೆಗಳನ್ನು ಸುಷ್ಮಾ ಸ್ವರಾಜ್ ನೇತೃತ್ವದ ಅಂದಿನ ಸ್ಥಾಯಿ ಸಮಿತಿಯು ಬೆಂಬಲಿಸಿದ್ದುದು.

ಇಂದು ಬದಲಾದ ರಾಜಕೀಯ ಪರಿಸ್ಥಿತಿಯಲ್ಲಿ ಕೇಂದ್ರ ಸರ್ಕಾರವು ಸಂಸದೆ ಬೃಂದಾ ಕಾರಂತ್ ಸಂಸತ್ತಿನಲ್ಲಿ ಮಂಡಿಸಿದ ಕೌಟುಂಬಿಕ ಹಿಂಸೆಯ ತಿದ್ದುಪಡಿ ಮಸೂದೆ 2005ನ್ನು ಅಂಗೀಕರಿಸಿದೆ. ಇದರ ಫಲವಾಗಿ 'ಕೌಟುಂಬಿಕ ಹಿಂಸೆ'ಯ ವ್ಯಾಖ್ಯಾನವು ವಿಸ್ತಾರವಾಗುತ್ತಾ ನಡೆದು ಇದೀಗ ಅದು ಕ್ರಿಮಿನಲ್ ನ್ಯಾಯಾಲಯಗಳನ್ನು ಮಾತ್ರವಲ್ಲ, ಸಿವಿಲ್ ನ್ಯಾಯಾಲಯದ ಬಾಗಿಲು ತಟ್ಟಿ ನ್ಯಾಯ ಕೇಳುವಂತೆ ಮಾಡುವಲ್ಲಿ ಸಫಲವಾಗಿದೆ.

ಕುಟುಂಬದೊಳಗಡೆ ಮಹಿಳೆಯರನ್ನು ದೈಹಿಕವಾಗಿ, ಮಾನಸಿಕವಾಗಿ ಮತ್ತು ಆರ್ಥಿಕ ಕಾರಣಗಳಿಗಾಗಿ ಹಿಂಸೆ ಮಾಡುವುದು ದೈಹಿಕ ಹಿಂಸೆಯಾಗುತ್ತದೆ. ದೈಹಿಕ ಹಿಂಸೆಗೊಳಗಾದ ಮಹಿಳೆಯೇ ಆಗಲಿ, ಅವಳ ಪರವಾಗಿ ಮೂರನೆಯವರಾಗಲಿ ದೂರು ಸಲ್ಲಿಸಬಹುದು. ಈ ಕಾನೂನಿನನ್ವಯ ಹಿಂಸೆಗೊಳಗಾದ ಮಹಿಳೆಯನ್ನು ಮನೆಯಿಂದ ಹೊರಗಟ್ಟುವಂತಿಲ್ಲ. ಹಾಗೆಯೇ ಅವಳು ಕೆಲಸ ಮಾಡುವ ಸ್ಥಳದಲ್ಲಿ ಹೋಗಿ ಕಿರುಕುಳ ನೀಡುವಂತಿಲ್ಲ. ಕೌಟುಂಬಿಕ ಹಿಂಸೆಯನ್ನು ವಿರೋಧಿಸುವಲ್ಲಿ, ಹಿಂಸೆಯಿಂದ ಮಹಿಳೆಯರು ರಕ್ಷಣೆ ಪಡೆಯುವಲ್ಲಿ ಈ ಕಾನೂನು ನೆರವಾಗುತ್ತದೆ.

ಕೇವಲ ಕಾನೂನಿನ ಜಾರಿಯಿಂದ ಮಹಿಳೆಯರಿಗೆ ನ್ಯಾಯ ದೊರಕಿಬಿಡುತ್ತದೆಂದು ಹೇಳುವುದು ಕಷ್ಟ ಅದು ಈ ಮಸೂದೆಯ ಸಂದರ್ಭದಲ್ಲೂ ನಿಜ. ಆದರೂ ತಕ್ಕ ಮಟ್ಟಿಗೆ ನ್ಯಾಯ ದೊರೆಯಬೇಕಾದರೆ, ಮಹಿಳೆಯರಿಗಾಗಿ ತುಂಗುದಾಣಗಳು, ಆರೋಗ್ಯ ಮತ್ತು ಕಾನೂನಿನ ನೆರವು ಮತ್ತು ಸ್ವಯಂ ಉದ್ಯೋಗದ ಯೋಜನೆಗಳು -ಈ ಎಲ್ಲ ಸೇವೆಗಳನ್ನು ಬಲಿಷ್ಠಗೊಳಿಸಬೇಕು. ಗಂಡು-ಹೆಂಡಿನ ನಡುವಿನ ಕ್ರೌರ್ಯ ಮಾತ್ರವಲ್ಲ, ಹೆಣ್ಣನ್ನು ದುರ್ಬಲಗೊಳಿಸಬಹುದಾದ ವ್ಯವಸ್ಥೆಯ ಎಲ್ಲ ದೌರ್ಜನ್ಯದ ಮುಖಗಳನ್ನೂ ಹೋರಾಡುವಂತಹ ಮನಃಸ್ಥಿತಿಯನ್ನು, ಸಂಕಲ್ಪ ಶಕ್ತಿಯನ್ನು ಮಹಿಳೆಯರಲ್ಲಿ ಮೂಡಿಸಬೇಕು.

*- ಎನ್. ಗಾಯತ್ರಿ*

# ಮಹಿಳಾ ಕಾರ್ಮಿಕರು
# ಕೈಗಾರಿಕಾ ಕಾನೂನು ಹಾಗೂ ಲೈಂಗಿಕ ಅಸಮಾನತೆ

-ತನು ಮೆಹ್ತಾ ತಿವಾರಿ

ಭಾರತದಲ್ಲಿ ಕೈಗಾರಿಕಾ ಕಾನೂನು ಕೆಲಸಗಾರರನ್ನೆಲ್ಲ 'ವ್ಯಕ್ತಿಗಳು' ಎಂದು ಒಟ್ಟಿನಲ್ಲಿ ಪರಿಗಣಿಸುತ್ತದೆಯೇ ಹೊರತು ಮಹಿಳಾ ಕಾರ್ಮಿಕರು ಹಾಗೂ ಪುರುಷ ಕಾರ್ಮಿಕರು ಎಂದು ಭೇದ ಮಾಡುವುದಿಲ್ಲ. ಆ ಮಟ್ಟಿಗೆ ಕೈಗಾರಿಕಾ ಕಾನೂನುಗಳು 'ಸಮಾನತೆ'ಯನ್ನು ಆಧರಿಸಿವೆ ಎನ್ನಬಹುದು. ಸಂಬಳ, ಕೆಲಸದ ಪರಿಸ್ಥಿತಿಗಳು, ಕೆಲಸದ ಅವಧಿ ಇತ್ಯಾದಿಗಳೆಲ್ಲ ಕಾನೂನು ರೀತ್ಯಾ ಪುರುಷ ಹಾಗೂ ಸ್ತ್ರೀ ಕಾರ್ಮಿಕರಿಗೆಲ್ಲರಿಗೂ ಒಂದೇ. ಆದರೆ ಆಚರಣೆಯಲ್ಲಿ ಬೇರೆ ಬೇರೆ. ಒಂದೇ ಕೆಲಸಕ್ಕೆ ಹೆಂಗಸರಿಗೆ ಗಂಡಸರಿಗಿಂತ ಕಡಿಮೆ ಸಂಬಳ ಕೊಡಲಾಗುತ್ತದೆ. ಇದನ್ನು ಸರಿಪಡಿಸಲೋಸುಗ 1976ರಲ್ಲಿ 'ಸಮಾನ ಸಂಬಳ ಶಾಸನ' ಎಂಬ ಶಾಸನವೊಂದನ್ನು ಮಾಡಲಾಯಿತು. ಈ ಶಾಸನವು ಪುರುಷ ಹಾಗೂ ಸ್ತ್ರೀ ಕಾರ್ಮಿಕರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ಸಲ್ಲಬೇಕು ಎಂದು ಸ್ಪಷ್ಟಪಡಿಸಿರುವುದರ ಜೊತೆಗೆ ಕೆಲಸಕ್ಕೆ ಸೇರಿಸಿಕೊಳ್ಳುವ ಸಮಯದಲ್ಲಾಗಲೀ, ಕೆಲಸದ ಇತರೇ ವಿಷಯಗಳಿಗೆ ಸಂಬಂಧಿಸಿಯಾಗಲೀ, ಲೈಂಗಿಕ ಆಧಾರದ ಮೇಲೆ ಮಹಿಳಾ ಕಾರ್ಮಿಕರ ವಿರುದ್ಧ ಭೇದಭಾವ ತಪ್ಪಿಸಲು ಯತ್ನಿಸಿದೆ.

ಈ ಸಾಮಾನ್ಯ ಶಾಸನವಲ್ಲದೆ ಹಲವಾರು ಕೈಗಾರಿಕೆಗಳು ಅವಶ್ಯವಿದ್ದೆಡೆಗಳಲ್ಲೆಲ್ಲ 'ಮಹಿಳಾ ಕಾರ್ಮಿಕರ' ಹಿತ ರಕ್ಷಿಸುವ ವಿಶೇಷ ನಿಬಂಧನೆಗಳಿರುವ ವಿಶಿಷ್ಟ ಶಾಸನಗಳನ್ನೂ ಘೋಷಿಸಿವೆ. ಉದಾಹರಣೆಗೆ, 'ಬಾಂಬೆ ಷಾಪ್ಸ್ ಅಂಡ್ ಎಸ್ಟಾಬ್ಲಿಷ್‌ಮೆಂಟ್ಸ್ ಆ್ಯಕ್ಟ್' ; ಅಂಗಡಿಯಲ್ಲಾಗಲೀ ಇತರೇ ಕರ್ಮಾಗಾರಗಳಲ್ಲಾಗಲೀ ದಿನದಲ್ಲಿ ಒಂದು ನಿರ್ದಿಷ್ಟ ವೇಳೆಯ ನಂತರ ಮಹಿಳಾ ಕಾರ್ಮಿಕರನ್ನು ಕೆಲಸದಲ್ಲಿರಿಸಿಕೊಳ್ಳಕೂಡದು ಎಂದು ಈ ಶಾಸನ ಸ್ಪಷ್ಟಪಡಿಸುತ್ತದೆ. ಇದೇ ರೀತಿಯ ಇತರ ಕೆಲವು ವಿಶಿಷ್ಟ ಕಾನೂನುಗಳ ಪೈಕಿ 'ಬೀಡಿ ಹಾಗೂ ಸಿಗರೇಟು ಕಾರ್ಮಿಕರ ನೌಕರಿ ಶಾಸನ'ವೂ ಒಂದು. ಇದನ್ನು 1966ರಲ್ಲಿ ಘೋಷಿಸಲಾಯಿತು. ಇದರ ಪ್ರಕಾರ, ಮಹಿಳಾ ಕಾರ್ಮಿಕರು ಕೆಲಸ ಮಾಡುವ ವೇಳೆಯಲ್ಲಿ ಅವರ ಸಣ್ಣ ಮಕ್ಕಳನ್ನು ನೋಡಿಕೊಳ್ಳಲೋಸುಗ ಮಾಲೀಕರು ಕಾರ್ಖಾನೆಯ ಆವರಣದಲ್ಲಿ ಸೂಕ್ತವಾದ ಶಿಶುಧಾಮಗಳನ್ನು ವ್ಯವಸ್ಥೆಗೊಳಿಸುವುದು ಕಡ್ಡಾಯವಾಗಿದೆ.

ಆದ್ದರಿಂದ ಮಹಿಳಾ ಕಾರ್ಮಿಕರ ಕಾರ್ಯ ಪರಿಸ್ಥಿತಿಗಳಿಗೆ ಸಂಬಂಧಿಸಿದಂತೆ ಸಮಾನತೆ ಹಾಗೂ ವಿಶೇಷ ಸೌಲಭ್ಯಗಳನ್ನು ಒದಗಿಸಿಕೊಡುವ ಕಾನೂನು ವ್ಯವಸ್ಥೆಯಲ್ಲಿ ಕೊರತೆಯೇನೂ ಇಲ್ಲವೆಂಬುದು ಈ ಲೇಖಕಿಯ ಅಭಿಪ್ರಾಯ. ಆದರೂ ಮಹಿಳಾ ಕಾರ್ಮಿಕರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇದಕ್ಕೆ ಇಂದಿನ ಸಾಮಾಜಿಕ ವಾಸ್ತವಿಕತೆಯೇ ಮುಖ್ಯ ಕಾರಣವಾಗಿದೆ. ಸಮಾಜದಲ್ಲಿ ಮಹಿಳೆಯರನ್ನು ದ್ವಿತೀಯ ದರ್ಜೆಯ ಪ್ರಜೆಗಳನ್ನಾಗಿ ಪರಿಗಣಿಸಲಾಗುತ್ತಿದೆ. ಹಾಗಾಗಿ ಈ ಸಮಸ್ಯೆಗಳ ಪರಿಹಾರಕ್ಕೆ ಏಕೈಕ ಮಾರ್ಗವೆಂದರೆ, ಮಹಿಳೆಯರೆಲ್ಲ ಒಂದುಗೂಡಿ ಸಂಘಟಿತರಾಗಬೇಕಾಗುತ್ತದೆ, ತಮ್ಮ ಸಮಸ್ಯೆಗಳ ಪರಿಹಾರಕ್ಕೆ ಎಡೆಬಿಡದೆ ಚಳವಳಿ ಹೂಡಬೇಕಾಗುತ್ತದೆ, ಹೋರಾಡಬೇಕಾಗುತ್ತದೆ. ಮಹಿಳಾ ಕಾರ್ಮಿಕರು ಎದುರಿಸುತ್ತಿರುವ ಮಾದರಿ ಸಮಸ್ಯೆಗಳಿಗೆ ಈ ಕೆಳಗಿನ ಅಂಶಗಳನ್ನು ನಿದರ್ಶನಗಳನ್ನಾಗಿ ನೀಡಬಹುದು.

**ಉದಾಹರಣೆ : 1.** (ಆಧಾರ : 'ಲೇಖಕ್ ಫೈಲ್', ಸಂ. 1, ನಂ. 1, ಜನವರಿ 2003) ವಾರಾಣಸಿಯಲ್ಲಿ ಜರ್ದೋಸಿ ಹಾಗೂ ಹಾಥರಿ ಕಾರ್ಯ ನಡೆಸುವವರಲ್ಲಿ ಬಹು ಮಂದಿ ಮಹಿಳೆಯರಾಗಿದ್ದಾರೆ. ವಯಸ್ಸು ಕೌಶಲ್ಯ, ಮತಧರ್ಮ, ವಿದ್ಯಾಮಟ್ಟ ಇವು ಏನೇ ಆಗಿರಲಿ ಈ ಮಹಿಳೆಯರು ತಮ್ಮ ಕೆಲಸವನ್ನು ಮನೆಗಳಿಗೆ ಸೀಮಿತಗೊಳಿಸಿಕೊಂಡಿರುತ್ತಾರೆ. ತಮ್ಮ ಕೆಲಸಕ್ಕೆ ಹೆಚ್ಚಿನ ಆರ್ಡರ್ ಹಾಗೂ ಅನುಕೂಲ ಪಡೆಯಲಾಗಲೀ, ಕೈಯಲ್ಲಿರುವ ಆರ್ಡರುಗಳಿಗೆ ಅವಶ್ಯವಾದ ಸಾಮಗ್ರಿಗಳನ್ನು

ಪಡೆಯಲಾಗಲೀ ಅವರು ಬಹಿರಂಗವಾಗಿ 'ಕಾರ್ಖಂದರ್' (ಕಂಟ್ರಾಕ್ಟರ್) ಅಥವಾ 'ಗಧಿದಾರ್'ಗಳಲ್ಲಿಗೆ ಹೋಗುವುದಕ್ಕೆ ಸಾಮಾಜಿಕ ನಿಷೇಧವಿದೆ. ಅದೇ ರೀತಿ ಕಾರ್ಖಂದರನೂ ಮಹಿಳಾ ಕಾರ್ಮಿಕಳೊಬ್ಬಳನ್ನು ಹಾಗೆಯೇ ಸಂಧಿಸಲೆಂದು ಕಾರ್ಯಸ್ಥಳಕ್ಕೆ ಹೋಗುವುದೂ ಅಷ್ಟು ಸುಲಭವೇನಲ್ಲ. ಇದು ತಮ್ಮ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳಲು ಮಹಿಳಾ ಕಾರ್ಮಿಕರು ಮಾಡುವ ಯತ್ನಗಳನ್ನು ತುಂಬ ಪರಿಣಾಮಕಾರಿಯಾಗಿ ವಿಫಲಗೊಳಿಸುತ್ತದೆ. ಅವರು ತಮಗೆ ಹೆಚ್ಚು ಕೆಲಸ ಕೊಡಬೇಕೆಂದು ಕೇಳಲು ಮಾಲೀಕರ ಬಳಿ ಹೋಗಲು ಆಗುವುದಿಲ್ಲ. ಏಕೆಂದರೆ ಅದು ತಮ್ಮ ಕುಟುಂಬ ಗೌರವಕ್ಕೆ ಮಸಿ ಬಳಿಯಬಹುದೆಂಬ ಅಂಜಿಕೆ ಅವರಲ್ಲಿರುತ್ತದೆ. ಆದ್ದರಿಂದ ತಮಗೆಷ್ಟು ಕೆಲಸ ಲಭಿಸುತ್ತದೆಯೋ ಅದನ್ನಷ್ಟೆ ಮನೆಯಲ್ಲಿ ಮಾಡಿಕೊಂಡಿರುವುದರಲ್ಲೇ ಅವರು ತೃಪ್ತರಾಗಿರಬೇಕು. ಇದರಲ್ಲಿ ಒಂದು ವಿಪರ್ಯಾಸವೂ ಇದೆ. ಅವರು ಮನೆಯಲ್ಲೇ ಕೆಲಸ ಮಾಡುವುದರಿಂದ ಅವರ ಕೆಲಸದ ಶ್ರೇಷ್ಠತೆಯ ಬಗೆಗೆ ತೀರ್ಪು ನೀಡುವುದರಲ್ಲಿ ಈ ವ್ಯವಸ್ಥೆ ಅವಳ ವಿರುದ್ಧವೇ ಕ್ರಿಯೆ ಜರುಗಿಸುತ್ತದೆ. ಮಹಿಳಾ ಕಾರ್ಮಿಕರು ಕೆಲಸವನ್ನು ಮನೆಗೆ ಕೊಂಡೊಯ್ಯುವುದರಿಂದ ಅವರ ಕೆಲಸದ ಮೇಲೆ ಉಸ್ತುವಾರಿ, ಅವರ ಕಾರ್ಯಕೌಶಲದ ತಪಾಸಣೆ ಇವೆಲ್ಲ ಇಲ್ಲವಾಗುತ್ತದೆ. ಹಾಗಾಗಿ ಅವರು ಮಾಡುವ ಕೆಲಸದಲ್ಲಿ ಸೊಗಸು ಇರುವುದಿಲ್ಲ, ಅದು ಒರಟಾಗಿರುತ್ತದೆ, ಎಂದು 'ಕಾರ್ಖಂದರ್'ರು ದೂರುತ್ತಾರೆ. ಹಾಗಾಗಿ ವಿಶಿಷ್ಟ ಗುಣಮಟ್ಟದ 'ಜರ್ದೋಸಿ' ಕಾರ್ಯ ಜರುಗಿಸುವಲ್ಲಿ ಮಹಿಳಾ ಕಾರ್ಮಿಕರಿಗೆ ಸಾಕಷ್ಟು ಕೌಶಲ್ಯ ಇರುವುದಿಲ್ಲವೆಂದು ಪರಿಗಣಿಸಲಾಗುತ್ತದೆ. ಇದಕ್ಕೆ ಪ್ರತಿಯಾಗಿ ಮಹಿಳೆಯರು ಏನು ಹೇಳುತ್ತಾರೆ ? ಗೃಹಿಣಿಯಾಗಿ ಮನೆಗೆಲಸ ಮಾಡದೆ ಹೋದಾಗ, ಕಾಲಕ್ಕೆ ಸರಿಯಾಗಿ ಊಟ ತಿಂಡಿ ತಯಾರಿಸದೆ ಹೋದಾಗ ಎಲ್ಲರೂ ತಕ್ಷಣವೇ ಮನೆಯ ಗೃಹಿಣಿಯರತ್ತಲೇ ಬೊಟ್ಟು ಮಾಡಿ ತೋರಿಸುತ್ತಾರೆ, ಎನ್ನುತ್ತಾರೆ ಅವರು. ಗಂಡಸರು ಮನೆಗೆಲಸವನ್ನು ಎಳ್ಳಷ್ಟೂ ಹಚ್ಚಿಕೊಳ್ಳುವುದಿಲ್ಲ. ಹಾಗಾಗಿ ಮನೆಗೆಲಸದ ಜೊತೆಗೆ ಮಹಿಳೆಯರು ತುಂಬ ಚಿತ್ತೈಕಾಗ್ರತೆ ಅವಶ್ಯವಾದ ಜರ್ದೋಸಿ ಕೆಲಸವನ್ನೂ ಮಾಡಬೇಕಾಗುವುದರಿಂದ, ಸಹಜವಾಗಿಯೇ ಕೆಲಸದಲ್ಲಿ ಲೋಪ-ದೋಷಗಳು ನುಸುಳುತ್ತವೆ. ಮಹಿಳೆಯರು ಮನೆಗೆಲಸವನ್ನು ನಿರ್ಲಕ್ಷಿಸಲಾರರು. ಅದೇ ಹೊತ್ತಿನಲ್ಲಿ ತಮ್ಮ ಆದಾಯದ ಏಕೈಕ ಆಕರವಾದ ಜರ್ದೋಸಿ ಕೆಲಸವನ್ನೂ ಬಿಟ್ಟುಕೊಡಲಾರರು.

ಮೇಲಿನ ಪರಿಸ್ಥಿತಿಯ ನೇರ ಪರಿಣಾಮವೆಂದರೆ ಜರ್ದೋಸಿ ವ್ಯವಹಾರದಲ್ಲಿ ಮಹಿಳೆಯರಿಗೆ 'ಪೀಸ್ ರೇಟ್' ಲೆಕ್ಕದಲ್ಲಿ ವೇತನ ನೀಡಲಾಗುತ್ತಿರುವುದಾಗಿದೆ. ಪುರುಷರಿಗಾದರೆ ಪೂರ್ಣ 'ನಫ್ರಿ' ಲೆಕ್ಕದಲ್ಲಿ ಸಂಬಳ ನೀಡಲಾಗುತ್ತದೆ. ಈ ವ್ಯತ್ಯಾಸ ಸಾಕಷ್ಟು ಗಮನಾರ್ಹವೇ ಆಗಿರುತ್ತದೆ. 'ಗೃಹ-ಆಧಾರಿತ' ಪುರುಷನಿಗೆ ಒಂದು ಸೀರೆಗೆ ಕೊನೆಯ ಪಕ್ಷ ರೂ. 160 ನೀಡಿದಲ್ಲಿ ಮಹಿಳಾ ಕಾರ್ಮಿಕರಿಗೆ ರೂ. 110 ನೀಡಲಾಗುತ್ತದೆ.

ಇದು ಲೈಂಗಿಕ ದೃಷ್ಟಿಕೋನದಿಂದ ಉದ್ಭವಿಸುವ ಪಕ್ಷಪಾತಕ್ಕೆ ಒಂದು ಆದರ್ಶ ನಿದರ್ಶನ. ಇದನ್ನು ತಪ್ಪಿಸಲು ಇರುವ ಕಾನೂನು ಪರಿಹಾರ ತೀರ ಸೀಮಿತ. ಇದರಲ್ಲಿ ಬದಲಾವಣೆ ತರಲು ಏಕೈಕ ಮಾರ್ಗವೆಂದರೆ ಮಹಿಳಾ ಕಾರ್ಮಿಕರು ಒಂದಾಗಿ ಒಂದು ದೃಢ ಸಂಘಟನೆ ಕಟ್ಟಿಕೊಳ್ಳುವುದು ಮತ್ತು ಹಂತಹಂತವಾಗಿ ಪರುಷರೊಂದಿಗೆ ಸಮಾನ ವೇತನಕ್ಕಾಗಿ, ತಮ್ಮ ಕಾರ್ಯಸ್ಥಿತಿಯ ಸುಧಾರಣೆಗಾಗಿ, ವಿಶೇಷ ರಿಯಾತಿ ಇತ್ಯಾದಿಗಳಿಗಾಗಿ, ಹೋರಾಟ ನಡೆಸುವುದು. ಇದರ ಜೊತೆಗೇ ಸಮಾಜದಲ್ಲೂ ಸ್ತ್ರೀ-ಪುರುಷರ ನಡುವಿನ ಸಂಬಂಧದಲ್ಲೂ ಸಾಮಾಜಿಕ ಪರಿವರ್ತನೆ ಆಗಬೇಕಾದ ತುರ್ತು ಅವಶ್ಯವಿದೆ. ಇದೂ ಕೂಡ ಮಹಿಳೆಯರ ಸ್ವಂತ ಚಳವಳಿಯ ಮೂಲಕವಷ್ಟೆ ಉಂಟಾಗುವುದು ಸಾಧ್ಯ.

'ಕಾರ್ಮಿಕ ಸಂಕ್ಷೇಮ ಹಾಗೂ ಸಂರಕ್ಷಣಾ ಕಾನೂನುಗಳು' ವಿಕಾಸಗೊಳ್ಳುವುದಕ್ಕೆ ಏಕಪ್ರಕಾರದ ರಾಜಕೀಯ ಚಳವಳಿ ಅತ್ಯವಶ್ಯ. ರಾಜಕೀಯ ರಂಗದಲ್ಲಿ 'ಗುಂಪುಗಾರಿಕೆ' ಹೆಚ್ಚು ಪ್ರಬಲವಾಗಿ ಒಂದೊಂದು ಗುಂಪು ತಮಗನುಕೂಲವಾದ ಕಾನೂನು ಸೌಲಭ್ಯಗಳನ್ನು ಕಸಿದುಕೊಳ್ಳುತ್ತದೆ. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಕಾರ್ಯ ನಿರ್ವಹಿಸುತ್ತಿರುವುದು ಈ ರೀತಿಯಲ್ಲೇ.

ಮಹಿಳೆಯರ ರಾಜಕೀಯ ಪ್ರಭಾವ ತುಂಬ ಸೀಮಿತವಾದುದು, ಏಕೆಂದರೆ, ಅವರ ಮೇಲೆ ಮಕ್ಕಳ ಹಾಗೂ ಕುಟುಂಬದ ಪಾಲನೆ-ಪೋಷಣೆಯ ಹೊರೆ ಬಿದ್ದಿರುತ್ತದೆ.

ಮಹಿಳೆಯರ ಮಧ್ಯೆ ಪರಸ್ಪರ ಸಂವೇದನೆ, ಸಂಘಟನೆ, ಪ್ರಚಾರ ಹಾಗೂ ಚಳವಳಿಗಳಷ್ಟೆ ಅವರಲ್ಲಿ ಪುರೋಗಾಮಿ ವಿಚಾರ ಹಾಗೂ ಹಕ್ಕು ಪ್ರಜ್ಞೆ ಬೆಳೆಸಬಲ್ಲವು. ಪುರುಷರಿಗೆ, ಕೆಲಸದ ವೇಳೆಯ ನಂತರ, ಇಂತಹ ಕ್ರಿಯೆಗಳಿಗೆ ಬೇಕಾದಷ್ಟು ಸಮಯ ಹಾಗೂ ಅವಕಾಶಗಳು ಇರುತ್ತವೆ. ಮಹಿಳೆಯರಿಗಾದರೋ, ಕಾರ್ಖಾನೆಯ 'ಕೆಲಸದ ವೇಳೆ' ಯ ನಂತರ ಮನೆಯ 'ಕೆಲಸದ ವೇಳೆ' ಪ್ರಾರಂಭವಾಗುತ್ತದೆ. ಹಾಗಾಗೀ ಅವರಿಗೆ ಒಂದುಗೂಡಲು, ಚರ್ಚೆ ನಡೆಸಲು, ಹೋರಾಟ ಯೋಜಿಸಲು ಅವಕಾಶವೇ ಇರುವುದಿಲ್ಲ. ಅವರ ಸಂಘಟನಾತ್ಮಕ ಶಕ್ತಿ ಕುಗ್ಗಿರುತ್ತದೆ. ತತ್ಪಲವಾಗಿ ಅವರ ಹೋರಾಟಗಳು ಶಾಸಕರ ಗಮನಕ್ಕೆ ಬರಲು 'ರಾಜಕೀಯ'ವಾಗಿ ಪ್ರಬಲವಾಗಿರುವುದಿಲ್ಲ.

**ಉದಾಹರಣೆ : ೨.** 'ಸುಭದ್ರತಾ ರಕ್ಷಣಾ ದಳ' ಗಳ ಪುರುಷ ಕಾರ್ಮಿಕರು ಬಹಳ ಕಾಲದಿಂದ ಶೋಷಿತ ವಿಭಾಗವಾಗಿ ಇದ್ದುಕೊಂಡು ಬಂದಿದ್ದಾರೆ. ಅವರ ಕೆಲಸದ ಅವಧಿ ಅನಿಯಮಿತ, ಸಂಬಳ ಮಾತ್ರ ಅತ್ಯಲ್ಪ. 'ವಾಚ್‌ಮನ್'ನ ಅವಶ್ಯಕತೆ ಎಷ್ಟು ಅನಿವಾರ್ಯ ಹಾಗೂ ಸಾರ್ವತ್ರಿಕ ಎಂದು ಬೇರೆ ಹೇಳಬೇಕಾಗಿಲ್ಲ. ಸಂಸ್ಥೆಗಳು, ಶಾಲೆಗಳು, ಕೈಗಾರಿಕೋದ್ಯಮಗಳು, ಹೋಟೆಲುಗಳು, ಆಸ್ಪತ್ರೆಗಳು..... ಎಲ್ಲೆಡೆಗಳಲ್ಲೂ 'ರಕ್ಷಣಾ ದಳ' ಅತ್ಯವಶ್ಯ. ಸಹಜವಾಗಿಯೇ ಇವರು ಬಹುದೊಡ್ಡ ಕಾರ್ಮಿಕ-ವಿಭಾಗ ರೂಪಿಸುತ್ತಾರೆ. ಹಾಗಾಗಿ ಇವರ ಹಿತರಕ್ಷಣೆಗೆ ಸಂಬಂಧಿಸಿ ಕಾನೂನುಗಳು ಅತ್ಯವಶ್ಯ. 'ಭಾಯ್' ಎಂದು ಕರೆಯಲಾಗುವ ಗೃಹ ಕಾರ್ಮಿಕರ ವಿಷಯದಲ್ಲೂ ಇದೇ ಮಾತು ನಿಜ. ನಗರಗಳಲ್ಲಿ ಮನೆಗೆಲಸ ಕಾರ್ಮಿಕರ ಸಂಖ್ಯೆ ಬಹುದೊಡ್ಡದು. ಇದರಲ್ಲಿ ಲಕ್ಷಾಂತರ ಮಹಿಳೆಯರು ಕಾರ್ಯನಿರತರಾಗಿದ್ದಾರೆ. ಈ ವಿಭಾಗವೂ ತುಂಬ ಶೋಷಣೆಗೊಳಗಾಗಿದೆ. ಕನಿಷ್ಠ ವೇತನಕ್ಕೂ ಕಡಿಮೆ ಕೂಲಿ ಪಡೆಯುವುದಲ್ಲದೆ ಇವರ ಕೆಲಸದ ವೇಳೆಗೂ ಇತಿ-ಮಿತಿ ಇರುವುದಿಲ್ಲ.

ಭದ್ರತಾ ದಳ (ಪುರುಷ ವಿಭಾಗ) ಕಾರ್ಮಿಕರು ಇದೀಗಷ್ಟೆ ತಮ್ಮ ಯೂನಿಯನ್‌ಗಳ ಮೂಲಕ ಸತತವಾಗಿ ಚಳವಳಿ ನಡೆಸಿದ ಫಲವಾಗಿ ತಮಗೆ ಅನುಕೂಲವಾಗುವಂಥ ಕಾನೂನು ಪಡೆಯುವದರಲ್ಲಿ ಯಶಸ್ವಿಯಾಗಿದ್ದಾರೆ. ಅವರ ಯೂನಿಯನ್‌ಗಳು ಕಾನೂನು ರೀತ್ಯ ಸವಾಲುಗಳನ್ನು ಹಾಕುವ ಮೂಲಕ ಮತ್ತು ಚಳವಳಿ ನಡೆಸುವ ಮೂಲಕ ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತಿವೆ. ಆದರೆ ಅದೇ ರೀತಿಯ ಸಮಸ್ಯೆಗಳು ಗೃಹಕೃತ್ಯ ಕಾರ್ಮಿಕರನ್ನೂ (ಹೆಚ್ಚಾಗಿ ಮಹಿಳೆಯರನ್ನು) ಬಾಧಿಸುತ್ತಿದ್ದರೂ, ಅವರ ಕೆಲಸದ ಪರಿಸ್ಥಿತಿಗಳನ್ನು ಸುಧಾರಿಸಿ ಕ್ರಮಬದ್ಧಗೊಳಿಸುವ ಯಾವ ಕಾನೂನುಗಳನ್ನೂ ಮಾಡಲಾಗಿಲ್ಲ. 1980ರ ದಶಕದಿಂದಲೂ ಗೃಹಕೃತ್ಯ ಕಾರ್ಮಿಕರಿಗೆ ಸಂಬಂಧಿಸಿದ ಮಸೂದೆಯು ಅನುಮೋದನೆಗಾಗಿ ಕಾದುಕುಳಿತಿದೆ. ರಾಜಕೀಯ ಪ್ರಭಾವಶೂನ್ಯತೆಯಿಂದಾಗಿ ಈ ಮಸೂದೆಗೆ ಸಂಬಂಧಿಸಿ ಯಾವುದೇ ಪ್ರಮಾಣದ ಚಳವಳಿ ಜರುಗಿಲ್ಲ. ಮಹಿಳೆಯರು ಅವರ ಲೈಂಗಿಕ ಕಾರಣದಿಂದಾಗಿಯಷ್ಟೆ ಹೇಗೆ ಅಮುಖ್ಯೀಕರಿಸಲ್ಪಟ್ಟಿದ್ದಾರೆ ಎಂಬುದಕ್ಕೆ ಇಲ್ಲಿ ನಾವು ಮತ್ತೊಂದು ಮುಖ್ಯ ನಿದರ್ಶನವನ್ನು ಕಾಣುತ್ತೇವೆ. ಮಹಿಳೆಯರು ಸುಸಂಬದ್ಧಿತ ಸಂಘಟನೆಯನ್ನೂ ಕಟ್ಟಿಕೊಳ್ಳಲಾರದಾಗಿದ್ದಾರೆ. ಏಕೆಂದರೆ, ಅದಕ್ಕಾಗಿ ಅವರ ಬಳಿ ಸಾಕಷ್ಟು ಸಮಯವಿಲ್ಲ. ಅಲ್ಲದೆ ಅವರು ಜೀವನದಲ್ಲಿ ಭಾರಿ ಜವಾಬ್ದಾರಿಗಳನ್ನೂ ಹೊತ್ತಿರುತ್ತಾರೆ, ಅನೇಕ ಸಾಮಾಜಿಕ ನಿಷೇಧಗಳಿಗೆ ಗುರಿಯಾಗಿರುತ್ತಾರೆ. ಸಮಾಜದಿಂದ ಅವರಿಗೆ ದೊರೆಯುತ್ತಿರುವ ಬೆಂಬಲವೂ ನಿಕೃಷ್ಟ.

ಹೀಗೆ ಮೇಲಿನ ಹಾಗೂ ಅಂಥವೇ ಅನೇಕಾನೇಕ ನಿದರ್ಶನಗಳು ಒಂದು ಸ್ಪಷ್ಟ ವಾಸ್ತವಾಂಶವನ್ನು ಎತ್ತಿತ್ತೋರಿಸುತ್ತವೆ. ಅದೆಂದರೆ - ಈ ದೇಶದಲ್ಲಿ ಮಹಿಳೆಯರ ಸ್ಥಿತಿ ಸುಧಾರಿಸಬೇಕಾದರೆ ಸುಸಂಗತ ಮಹಿಳಾ ವಿಮೋಚನಾ ಚಳವಳಿ ಬೆಳೆಯಬೇಕಾಗಿದೆ. ಅಂಥ ಚಳವಳಿ ನಮ್ಮ ಸಮಾಜದಲ್ಲಿ ಕ್ರಿಯಾಶೀಲವಾಗಿರುವ ಎಲ್ಲ ಪಾರಂಪರಿಕ ಹಾಗೂ ಧಾರ್ಮಿಕ ಪ್ರತಿಬಂಧಕಗಳಿಗೂ ಅರ್ಥಪೂರ್ಣ ಸವಾಲು ಹಾಕಬೇಕಾಗಿದೆ. ಜೊತೆಗೆ ಮಹಿಳೆಯರು ಕಾನೂನಿನಲ್ಲಿ ದೂರವ್ಯಾಪೀ ಬದಲಾವಣೆಗಳನ್ನು ತರಬಲ್ಲಂಥ ರಾಜಕೀಯ ಪ್ರಭಾವವಿರುವ ಬಲಿಷ್ಠ ಸಂಘಟನೆಗಳನ್ನು ನಿರ್ಮಿಸಿಕೊಳ್ಳಬೇಕಾಗಿದೆ. ಹಾಗಾದರಷ್ಟೆ ಭಾರತದಲ್ಲಿ ಮಹಿಳೆಯರ ಸ್ಥಾನಮಾನ ಈಗಿರುವ ದ್ವಿತೀಯ ದರ್ಜೆಯ ಸ್ಥಿತಿಯಿಂದ ಪುರುಷರೊಂದಿಗೆ ಸಮಾನತೆಯ ಸ್ಥಿತಿಗೆ ಏರಬಲ್ಲುದು. ❑❑

# ಸೀಮಂತ

-ಹೆಚ್. ನಾಗವೇಣಿ

ಸೀತೆ ಅಪ್ಪನೊಂದಿಗೆ ಕಾಳಾವರಕ್ಕೆ ಸೀಮಂತಕ್ಕೆ ಹೊರಟಿದ್ದಳು. ಅಪ್ಪನ ಬಲಕೈ ಹಿಡಿದು ಪುಟ್ಟ ಹೆಜ್ಜೆ ಹಾಕುತ್ತಿದ್ದ ಸೀತೆಯ ಮೈಯಿಡೀ ಸಂಭ್ರಮ ಜಿನುಗುತ್ತಿತ್ತು. ಸೀಮಂತದ 'ವೈಭವ'ನ್ನೊಮ್ಮೆ ಕಣ್ಣಾರೆ ಕಾಣಬೇಕೆಂಬ ಆಸೆ ಆಕೆಗೆ ಬಹಳ ದಿನಗಳಿಂದ. ಇದೀಗ ಸ್ವಂತ ಮಾಮಿಯದೇ ಸೀಮಂತ.

ಸೀತೆ, ಸೀಮಂತ ಎಂಬ ಪದ ಕೇಳಿದ್ದಳೇ ವಿನಾ ಒಮ್ಮೆಯೂ ಆದರ ಸಂಭ್ರಮ ಸವಿದವಳಲ್ಲ. 'ಒಂದೇ ಒಂದು ಸಲ ನನ್ನನ್ನು ಸೀಮಂತಕ್ಕೆ ಕರೆದೊಯ್ಯಮ್ಮ' ಎಂದು ಅಮ್ಮನಲ್ಲಿ ಆಕೆ ಅದೆಷ್ಟೋ ಬಾರಿ ಕೊರಳಡ್ಡ ಹಾಕಿ ಗೋಗರೆದಿದ್ದಾಳೆ. 'ನಿನ್ನ ಬಸ್ರಿಯಲ್ಲಿ ನಂಗೆ ಸೀಮಂತ ಮಾಡಿದ್ದು ನೀನು ನೋಡಿಲ್ವೇನೆ - ಎಂದು ಅಮ್ಮ ಸೀತೆಯ ತಲೆ ಸವರಿ ರಂಗಿನ ಮಾತನ್ನಾಡುವಾಗ ಸೀತೆ ಸಿಡುಕುತ್ತಾಳಷ್ಟೆ- ಅಸಹನೆಯಿಂದ. ಆ ಮನೆ ಈ ಮನೆಯವರು ಅಲ್ಲಲ್ಲಿ ನಡೆದ ಸೀಮಂತದ ಬಗ್ಗೆ ಬಸುರಿಗೆ ಬಡಿಸಿದ್ದ ಸಿಹಿತಿಂಡಿಗಳ ಬಗ್ಗೆ ಬಾಯಿ ಕಿವಿಗಳಲ್ಲಿ ನೀರೂರುವ ಹಾಗೆ, ಮೂರಕ್ಕೆ ನಾಕು ಸೇರಿಸಿ ಹೇಳುವಾಗಲೆಲ್ಲಾ ಸೀತೆ ಆಸೆ ಕುತೂಹಲ ತಡೆಯಲಾರದೆ ಅಮ್ಮನಲ್ಲಿ ಹಲವು ಪ್ರಶ್ನೆಗಳನ್ನು ಕೇಳುವುದಿದೆ.

'ಸೀಮಂತ ಅಂದ್ರೆ ಏನಮ್ಮ'? - ಎಂಬುದು ಆಕೆಯ ಮೊದಲ ಪ್ರಶ್ನೆ. 'ಹಾಗಂದ್ರೆ ಬಯಕೆ' ಎಂದು ಅಮ್ಮನೆಂದರೆ, 'ಬಯಕೆ ಅಂದ್ರೇನಮ್ಮ ?' - ಎಂಬುದು ಮರು ಪ್ರಶ್ನೆ. ಬಸುರಿಯರು ಆಸೆ ಪಡುವ ತಿಂಡಿಗಳನ್ನು ತಿನ್ನಿಸುವುದು' -ಎಂದು ಅಮ್ಮನೆಂದರೆ 'ಬಸ್ರಿ ಯಾಕಾಕ್ತಾರಮ್ಮ..... ಹೇಗಾಗ್ತಾರೆ'? -ಹೀಗೆ ಪ್ರಶ್ನೆಗಳ ಮಾಲೆ ಬೆಳೆಯುತ್ತಿರುತ್ತೆ. ಅಮ್ಮನೂ ತಾಳ್ಮೆಯಿಂದ, ಜಾಣ್ಮೆಯಿಂದ ಉತ್ತರಿಸುತ್ತಾಳೆ. ಅಮ್ಮನ ಉತ್ತರವೆಂದರೆ ಸೀತೆಗೆ ಒಂಥರಾ ತುರಿಗಜ್ಜಿ ಇದ್ದಂತೆ. ತುರಿಸಿದಂತೆಲ್ಲ ಇನ್ನಷ್ಟು ತುರಿಕೆ ಆ ಕಜ್ಜಿ ಸುತ್ತಲೇ ಹುಟ್ಟಿಕೊಳ್ಳುವಂತೆ, ಅಮ್ಮ ಉತ್ತರಿಸಿದಂತೆಲ್ಲ ಮತ್ತದೇ ಉತ್ತರದ ಸುತ್ತ ಇನ್ನಷ್ಟು ಪ್ರಶ್ನೆಗಳು ಹುಟ್ಟಿಕೊಳ್ಳುತ್ತಿದ್ದವು. ಅಮ್ಮನ ತಾಳ್ಮೆಯ ಕುಡಿಕೆ ಬರಿದಾಗುವುದು - 'ನಾನು ಬಸ್ರಿಯಾಗುವುದು ಯಾವಾಗಮ್ಮಾ ನಂಗೂ ಸೀಮಂತ ಮಾಡ್ತೀಯಾ' - ಎಂಬ ಪ್ರಶ್ನೆಯನ್ನು ಸೀತೆ ಅಮ್ಮನತ್ತ ಎಸೆದಾಗ ಮಾತ್ರ.

'ಬಾಯ್ಮುಚ್ಚೆ ದಿಂಡೆ ಬಸವಿ' - ಎಂದು ತಾಯಿ ಗದರಿಸಿ ತಲೆಗೊಂದು ಮೊಟಕಿದರೆ ಸೀತೆಯೇನೋ ಆಕ್ಷಣ ಪೆಚ್ಚಾಗುತ್ತಿದ್ದಳು. ಆದರೆ ಹಸುಳೆಯಲ್ಲಿ ಹುಟ್ಟುವ ಕುತೂಹಲ ಎಂದಾದರೂ ಕುಂದುವುದುಂಟೆ ? ಮತ್ತಷ್ಟು ಬಸಿರು, ಸೀಮಂತದ ಬಗ್ಗೆ ತಿಳಿದುಕೊಳ್ಳಲು ಆ ಪುಟ್ಟ ಮನಸ್ಸು ಚಡಪಡಿಸುತ್ತಿತ್ತು. ಒಟ್ಟಾರೆ ಬಸುರಿಗೆ ಬಡಿಸುವ ಸಿಹಿತಿಂಡಿಗಳನ್ನು ತಾನೊಮ್ಮೆ ತಿನ್ನಬೇಕು - ಎಂಬ ಆಸೆಯ ಎಳೆ, ಆ ಎಳೆಮನಸ್ಸೊಳಗೆ ಜಗ್ಗಾಡುತ್ತಿತ್ತು.

ಇದೀಗ ಸೀತೆ, ಮಿಸ್ಕಿತ್ ಮೋಟಾರಲ್ಲಿ ಕೂತು ಉದ್ಯಾವರ ಸೇತುವೆ ದಾಟುತ್ತಿದ್ದಳು. ನದಿಯ ಸೆರಗಿನ ಕಾಂಡ್ಲ ಪೊದೆಯಲ್ಲಿ ಕೂತಿದ್ದ ಬಿಳಿ ಕೊಕ್ಕರೆಗಳು ಸೀತೆಯಿಂದ ಮಾಮಿಯ ಸೀಮಂತದ ಧ್ಯಾನವನ್ನು ಕ್ಷಣ ಕಾಲ ಕಸಿದುಕೊಂಡವು. ಆದರೆ ಮತ್ತೆ ಚಿತ್ತದೊಳಗೆ ಮುತ್ತಿ ಬಂದಿತ್ತು, ಗೆಳತಿ ರೇವತಿಯ ಬಾಯಿಂದ ಕೇಳಿದ್ದ ಸೀಮಂತದ ವರ್ಣನೆ ; ಅದರಲ್ಲೂ ಕೋಳಿಮೊಟ್ಟೆಯ ಸಂಗತಿ.

ಮೊನ್ನೆ ಸೀತೆಯ ಗೆಳತಿ ರೇವತಿ ತನ್ನ ಚಿಕ್ಕಮ್ಮನ ಸೀಮಂತಕ್ಕೆ ಬಜಪೆಗೆ ಹೋಗಿ ಬಂದಿದ್ದಳು. ಮರುದಿನ ಶಾಲೆ ಬಂದವಳೇ, ಸೀತೆಗೊಂದು ರವೆಲಾಡು, ಒಂದಷ್ಟು ಸಕ್ರೆ ಕಡ್ಲೆ ಕೊಟ್ಟು ಚಿಕ್ಕಮ್ಮನನ್ನು ಮದುಮಗಳು ಮಾಡಿ ಗೆರಸೆಯಲ್ಲಿ ಬಡಿಸಿದ್ದನ್ನು ರಸವತ್ತಾಗಿ ವರ್ಣಿಸಿದ್ದಳು. ಚಿಕ್ಕಮ್ಮನನ್ನು ಕುಳ್ಳಿರಿಸಿ, ಅವಳ ಮುಂದೆ ಗೆರಸೆಯಿಟ್ಟು ರವೆಲಾಡು, ಮೋಹನ್ ಲಾಡು, ಅರಳುಂಡೆ, ಸುಕ್ರುಂಡೆ, ಹೋಳಿಗೆ, ಸಕ್ರೆ ಕಡ್ಲೆ, ಚಕ್ಕುಲಿ, ಮಾಲ್ಪುರಿ, ಹಲ್ವ, ಮಿಠಾಯಿ, ಜಿಲೇಬಿ, ಕೋಳಿಮೊಟ್ಟೆ ಇತ್ಯಾದಿ ಇತ್ಯಾದಿ ಬಡಿಸಿದ್ದು ; ಚಿಕ್ಕಮ್ಮ ಕೋಳಿಮೊಟ್ಟೆಯನ್ನು ತನಗೂ ತನ್ನ ತಮ್ಮನಿಗೂ ಕೊಟ್ಟಿದ್ದು....' -ರೇವತಿಯ ವರ್ಣನೆ ಇನ್ನೂ ಮುಂದುವರೆದಿತ್ತು, ಅಷ್ಟರಲ್ಲೇ ಸೀತೆ ಸಿಟ್ಟಿನಿಂದ ರವೆಲಾಡನ್ನು ಕಿಟಕಿಯಿಂದ ಹೊರಕ್ಕೆಸೆದಿದ್ದಳು.

ರೇವತಿ ತನಗೆ ಕೋಳಿಮೊಟ್ಟೆ ತರದೆ, ರವೆಲಾಡು ತಂದಿದ್ದು ಆಕೆಗೆ ಸಿಟ್ಟು ಬರಿಸಿತ್ತು. ಸೀತೆಗೆ ಸಿಹಿತಿಂಡಿಯೆಂದರೆ ಪ್ರಾಣ, ಅದಕ್ಕಿಂತಲೂ ಕೋಳಿಮೊಟ್ಟೆ ಎಂದರೆ ಮಹಾಪ್ರಾಣ. ಇದುವರೆಗೂ ಆಕೆ ಒಂದು ಬಾರಿಯೂ ಇಡೀ ಕೋಳಿಮೊಟ್ಟೆ

ತಿಂದಿಲ್ಲ. ಅಮ್ಮ ಯಾವತ್ತೋ ಒಂದೆರಡು ಬಾರಿ ತುಂಡು ಕೋಳಿಮೊಟ್ಟೆ ಕೊಟ್ಟು ರುಚಿ ತೋರಿಸಿದ್ದಳಷ್ಟೆ ಸೀತೆಗೆ ಮತ್ತೆ ಮತ್ತೆ ಕೋಳಿಮೊಟ್ಟೆ ತಿನ್ನಬೇಕೆಂಬ ಆಸೆ. ಅಮ್ಮನಲ್ಲಿ ಎಷ್ಟೋ ಬಾರಿ, ಮೊಟ್ಟೆ ಬೇಯಿಸಿ ಕೊಡು ಎಂದು ಕೇಳಿದಾಗಲೆಲ್ಲ 'ದಿನಾ ಕೋಳಿಮೊಟ್ಟೆ ತಿನ್ನುವುದಕ್ಕೆ ನಾವೇನು ಸಾವಿರ ಮುಡಿ ಹುಟ್ಟುವಳಿಯುಳ್ಳ ಗುತ್ತಿನ ಮನೆಯವ್ರಾ....?' -ಎಂದು ಅಮ್ಮ ಸೀತೆಯನ್ನು ಗದರಿಸಿ ಬಾಯಿ ಮುಚ್ಚಿಸಿದ್ದಿದೆ. ಆದರೂ ರಾಂಪನ ಸೇಂದಿಯಂಗಡಿಯಲ್ಲಿ, ಚಾಕಣದ ಸೀತನ ಬೇಯಿಸಿಡುತ್ತಿದ್ದ ಕೋಳಿಮೊಟ್ಟೆಗಳು ಸೀತೆಯ ಕಣ್ಣಿಗೆ ಬಿದ್ದಾಗಲೆಲ್ಲ ತಿನ್ನುವಾಸೆಯಾಗಿ ಅಮ್ಮನಲ್ಲಿ ಕೋಳಿಮೊಟ್ಟೆ ಕೇಳಬೇಕೆಂದೆನಿಸಿದರೂ, ಅಮ್ಮನ ಗದರಿಕೆ ನೆನಪಿಸಿಕೊಂಡು ಮೆದುವಾಗುತ್ತಿದ್ದಳು.

ರೇವತಿಯ ಚಿಕ್ಕಮ್ಮನ, ಸೀಮಂತದ ವರ್ಣನೆಯನ್ನು ಸವಿಯುತ್ತಿದ್ದ ಸೀತೆಯ ಮನಸ್ಸು ಇದೀಗ ಕಾಳಾವರದ ಜಾನಕಿ ಮಾಮಿಯ ಸೀಮಂತದತ್ತ ಹೊರಳಿತು. ಯಾವಾಗೊಮ್ಮೆ ಕಾಳಾವರ ತಲುಪುತ್ತೇನೋ ? ಯಾವಾಗ ಜಾನಕಿ ಮಾಮಿಯನ್ನು ತಪ್ಪಿ ಹಿಡಿಯುತ್ತೇನೋ ? -ಎಂಬ ಕಾತುರದಲ್ಲೇ ಸೀತೆ ಯೋಚನೆ ಮುಂದರಿಸಿದಳು. ಮಾಮಿಯ ಬಯಕೆ ಬಡಿಸುವಾಗ ಆಕೆ ನನ್ನನ್ನು ತನ್ನ ಮಗ್ಗಲ್ಲೇ ನಿಲ್ಲಿಸಿಕೊಳ್ತಾಳೆ ; ಆಕೆಗೆ ಬಡಿಸುವ ಕೋಳಿಮೊಟ್ಟೆ ಸಿಹಿತಿಂಡಿಗಳನ್ನೆಲ್ಲಾ ಮೊದಲು ನಂಗೆ ತಿನಿಸ್ತಾಳೆ ; ಯಾವುದನ್ನ ತಿನ್ಲಿ ? ಯಾವುದನ್ನು ಬಿಡ್ಲಿ.....? ಹೀಗೆಲ್ಲಾ ಸೀತೆಯ ಯೋಚನೆ, ಲೆಕ್ಕಾಚಾರ ಮುಂದುವರಿಯುತ್ತಿರಬೇಕಾದರೆ ತಟ್ಟನೆ ಆಕೆಗೆ ನೆನಪಿಗೆ ಬಂದಿದ್ದು ಅಮ್ಮನ ಎಚ್ಚರಿಕೆ ಮಾತುಗಳು.

ಈ ದಿನ ಬೆಳಿಗ್ಗೆ ಅಪ್ಪನೊಂದಿಗೆ ಸೀತೆ ಮಾಮಿಯ ಸೀಮಂತಕ್ಕೆ ಹೊರಟು ನಿಂತಾಗ, ಅಮ್ಮ ಸೀತೆಯ ಕೊರಳಿಗೆ ಮಣಿಸರವೊಂದನ್ನು ಹಾಕುತ್ತಾ 'ಮಾಮಿಯಲ್ಲಿ ಅವ್ರು ಮಾತಾಡ್ಸಿದ್ರೆ ಮಾತ್ರ ಮಾತಾಡು ಮಗಾ, ಬೆಚಕೆರೆ ಹಕ್ಕಿಯಂತೆ ಮಾತಾಡ್ಬೇಡಾ......, ಏನಾದ್ರು ಕೊಟ್ರೆ ಮೊದ್ಲಿಗೆ ಬೇಡಾನ್ನು; ನಾವು ಬಡವ್ರೂಂತ ಗೊತ್ತಿದೆ, ಗಬಕ್ಕನೆ ಬಾಚಿಕೊಂಡ್ರೆ ನಾಕು ದಿನ ಹೊಟ್ಟೆಗಿಲ್ದಿಲ್ಲಾಂತ ಅಂದ್ಕೋ ಬಹುದು ಅವ್ರ ಮನೆಯವ್ರು' - ಹೀಗೆ ಅನೇಕಾನೇಕ ಕಿವಿಮಾತು ಹೇಳಿ ಕಳುಹಿಸಿದ್ದಳು. ಸೀತೆ ಎಲ್ಲಕ್ಕೂ ಹೂಂಗುಡುತ್ತಾ ಶಿಸ್ತಾಗಿ ತಲೆಯಲ್ಲಾಡಿಸಿದ್ದಳು. ಇದೀಗ ಸೀತೆ, ಅಮ್ಮನ ಕಿವಿಮಾತುಗಳನ್ನು ತಾನು ಪಾಲಿಸಬೇಕೇ ಅಥವಾ ಬಸ್ಸಿನ ಕಿಟಕಿಯಾಚೆ ತೂರಿ ಬಿಡಬೇಕೇ- ಎನ್ನುವ ತುಯ್ದಾಟದಲ್ಲಿರಬೇಕಾದರೆ ಅಪ್ಪನ ಮನಸ್ಸು ಬೇರೆಯೇ ದಿಕ್ಕಿನಲ್ಲಿ ಯೋಚಿಸುತ್ತಿತ್ತು.

ಸೀತೆಯ ಅಪ್ಪ ಗೋಪಾಲ ಗಾಣಿಗ, ತಂದೆ ತಾಯಿಯರಿಬ್ಬರೂ ತೀರಿದ ನಂತರ, ಪ್ರಾಯಕ್ಕೆ ಬಂದ ಇಬ್ಬರು ತಂಗಿಯಂದಿರನ್ನು ಊರಿಂದ ಕರೆತಂದು ತನ್ನೊಡನೇ ಇರಿಸಿಕೊಂಡಿದ್ದ. ಮೊದಲನೇ ತಂಗಿ ಸುಮತಿಗೆ ತನ್ನ ಹೆಂಡತಿಯ ಚಿನ್ನ ಮಾರಿ, ಅವರಿವರಲ್ಲಿ ಸಾಲ-ಸೋಲ ಮಾಡಿ, ಜೋಗಟ್ಟೆಯ ದಬ್ಬುಗಾಣಿಗನ ಮಗ ಕೇಶವನಿಗೆ ಮದುವೆ ಮಾಡಿ ಕೊಟ್ಟಿದ್ದ. ಎರಡನೇಯವಳು ಜಾನಕಿ, ಆಕೆಯ ಮದುವೆಯ ಕಾಲಕ್ಕೆ ಗೋಪಾಲನ ಕೈ ಸಂಪೂರ್ಣ ಕಾಲಿಯಾಗಿತ್ತು. ಕಿನ್ನಿಗೋಳಿಯಲ್ಲಿ ಉಗ್ರಾಣಿ ಕೆಲಸದಲ್ಲಿದ್ದ ಗೋಪಾಲನಿಗೆ ಮೊದಲೇ ದಮ್ಮಿನ ಕಾಯಿಲೆ. ಬರುವ ಸಂಬಳದಲ್ಲಿ ಅರ್ಧ ಮದ್ದಿಗೆ ಸುರಿದರೆ, ಇನ್ನರ್ಧದಲ್ಲಿ ಕುಟುಂಬದ ಹೊಟ್ಟೆ ತುಂಬಬೇಕು, ಇನ್ನಿತರ ಮೇಲ್ಖರ್ಚುಗಳನ್ನು ಇದರಲ್ಲೇ ಸರಿತೂಗಿಸಬೇಕು. ಮನೆಯಲ್ಲಿ ದಾರಿದ್ರ್ಯ ತುಂಬಿ ತುಳುಕಾಡುತ್ತಿದ್ದಂತೆ ಸುಮತಿಯ ಗಂಡ ಕೇಶವ, ಎರಡನೇಯ ಶ್ರೀಮಂತ ಸಂಬಂಧವೊಂದಕ್ಕೆ ಜಾನಕಿಯನ್ನು ಪ್ರಸ್ತಾಪಿಸಿದಾಗ, ಗೋಪಾಲ ಹಿಂದೆ ಮುಂದೆ ನೋಡದೆ ಒಪ್ಪಿದ್ದ. ಎರಡನೇ ಸಂಬಂಧವನ್ನು ನಿರಾಕರಿಸಿದ ಜಾನಕಿ ಮುಖ ಊದಿಸಿಕೊಂಡೇ ಮದುವೆ ಮಂಟಪ ಏರಿದ್ದಳು. ಆಕೆಯ ಊದಿದ ಮುಖ, ಗಂಡನ ಮನೆಯ ಸಿರಿವಂತಿಕೆಯ ತಂಪು ಸೋಕಿದೊಡನೆ ತಟ್ಟನೆ ಸರಿ ಹೋಗಿತ್ತು. ಹಾಲಿನಲ್ಲಿ ಮುಳುಗಿ, ತುಪ್ಪದಲ್ಲಿ ಈಜುವಂತಾ ಸಿರಿವಂತಿಕೆಯಲ್ಲಿದ್ದ ಜಾನಕಿ ಮತ್ತೆ ತವರಿನ ದಿಕ್ಕಿಗೆ ತಲೆ ಹಾಕಿಯೂ ಮಲಗಲಿಲ್ಲ. ಇದು ಸುಗ್ಗಿ ತಿಂಗಳು. ಜಾನಕಿಗೆ ಮದುವೆಯಾಗಿ ಮುಂದಿನ ಭೇಷ ತಿಂಗಳಿಗೆ ಸರಿಯಾಗಿ ವರುಷ. ಕಳೆದ ಆಟಿ ತಿಂಗಳಲ್ಲಿ 'ಆಟಿ ಕೂರಲು' ತಂಗಿಯನ್ನು ತವರಿಗೆ ಕರೆತರಲು ಹೋದ ಗೋಪಾಲನಲ್ಲಿ, ತಾನು ಬರುವುದಿಲ್ಲವೆಂದು ಹೇಳಿ ಕಳುಹಿಸಿದ ನಂತರ ಆ ಕಡೆ ಗೋಪಾಲನೂ ತಲೆ ಹಾಕಿಲ್ಲ. ಇದೀಗ ಆತ ಜಾನಕಿ ಮನೆಗೆ ಹೋಗುತ್ತಿರುವುದು ಎರಡನೇ ಬಾರಿ. ಗೊಪಾಲ ಗಾಣಿಗ ತನ್ನ ತಂಗಿಯ ಬಾಣಂತಿತನದ ಬಗ್ಗೆ ಯೋಚಿಸುತ್ತಿದ್ದರೆ, ಪುಟ್ಟ ಸೀತೆಯ ಮನಸ್ಸಿನಲ್ಲಿ ನೂರಾರು ಸಂಗತಿಗಳ ಮಂಥನ ನಡೆಯುತ್ತಿತ್ತು. ಸೀಮಂತ, ಕೋಳಿ ಮೊಟ್ಟೆ ಜಾನಕಿ ಮಾಮಿಯ ಮನೆ, ಸಿಹಿತಿಂಡಿ ರಾಶಿ ಇವುಗಳೆಲ್ಲಾ ನಾಮುಂದು - ತಾಮುಂದು ಎಂದು ಸುಳಿದು ಬರುತ್ತಿದ್ದವು.

ಗೋಪಾಲ ಸೀತೆಯ ಕೈಹಿಡಿದು ಮನೆಯಂಗಳಕ್ಕೆ ಕಾಲಿರಿಸಿದ. ಸೀತೆ ತನ್ನ ಕಣ್ಣರಳಿಸಿ ಎರಡಂತಸ್ತಿನ ಮನೆಯನ್ನು ನೋಡಿ, ಮಾಮಿ ಮನೆ ರೇವತಿ ಮನೆಯಷ್ಟೇ ದೊಡ್ಡದಿದೆ ಎಂದು ಖುಷಿ ಪಟ್ಟು ಕೊಂಡಳು. ಅಂಗಳ ದಾಟಿ ಚಾವಡಿಯೊಳಗೆ ಬರುವಷ್ಟರಲ್ಲಿ ಮಾಮಿಯ ಗಂಡ ಬಂದು ಎದುರ್ಗೊಂಡ. ಸೀತೆ ಕಣ್ಣಲ್ಲೇ ಮಾಮಿಗಾಗಿ ಹುಡುಕಾಡಿದಳು; ಮಾಮಿ ಕಾಣಿಸಲೇ ಇಲ್ಲ. ಚಾವಡಿಯೊಳಗೆ ಬಂದು ಅಪ್ಪನೊಡನೆ ಒಂದು ಮೂಲೆಯಲ್ಲಿ ಕುಳಿತಳು. ಕುಳಿತ ಮೂಲೆಯಿಂದಲೇ ಅಪ್ಪನಲ್ಲಿ ಮಾಮಿಗಾಗಿ ಪೀಡಿಸಲಾರಂಭಿಸಿದಳು. ಅಪ್ಪ 'ಈಗ ಬರುತ್ತಾಳೆ... ಬಂದೇ ಬಿಟ್ಳು ಮಾಮಿ' -ಎಂದು ಸಮಾಧಾನ ಹೇಳುತ್ತಿದ್ದ.

ನಿಧಾನವಾಗಿ ಸೀತೆಯ ಧ್ಯಾನ, ಮಾಮಿಯಿಂದ ನೇರವಾಗಿ ನಡುಮನೆಯಲ್ಲಿ ನೆರೆದಿದ್ದ ಹೆಂಗಸರತ್ತ ಹೊರಳಿತು. ಪಟ್ಟೆ ಸೀರೆಯುಟ್ಟು, ಕೊರಳು ತುಂಬಾ ಚಿನ್ನ ಹೇರಿದ್ದ ಹೆಂಗಸರೆಲ್ಲಾ ನಡುಮನೆಯಲ್ಲಿ ಕುಳಿತು ಹರಟುತ್ತಿದ್ದರು. ಸೀತೆ ಅವರನ್ನೆಲ್ಲ ಬಿಟ್ಟಕಣ್ಣಿನಿಂದ ಹೆದರುತ್ತಲೇ ನೋಡಲಾರಂಭಿಸಿದಳು. ಕೆಂಪಂಚಿನ ಪಟ್ಟೆಸೀರೆಯುಟ್ಟ ಹೆಂಗಸೊಂದು ಕೊರಳ ತುಂಬಾ ಹೇರಿಕೊಂಡ ಒಡವೆಯತ್ತಲೇ ಸೀತೆ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದಳು. ಆಕೆಯ ಸರ ತುಂಬಿದ ಕೊರಳು ಕಂಡು ಸೀತೆಗೆ ಇಸ್ಮಾಯಿಲ್ ಬ್ಯಾರಿಯ ಗಾಡಿಹೋರಿಯ ಕೊರಳು ನೆನಪಾಯ್ತು. ತಕ್ಷಣ ಅಪ್ಪನಲ್ಲಿ ಇದನ್ನು ಉಸುರಬೇಕೆಂದುಕೊಂಡಳು. ಆದರೆ ಅಪ್ಪ ಕೂತಲ್ಲಿ ಕೂರಲಾರದೆ, ತಂಗಿಯನ್ನು ನೋಡಲು ಚಡಪಡಿಸುತ್ತ ಅತ್ತಿತ್ತ ಹೋಗಿ ಬಂದು ಮನೆಯ ಮೂಲೆ ಮೂಲೆಗೂ ಕಣ್ಣಾಡಿಸುತ್ತಿದ್ದ. ಅಪ್ಪನ ಕಣ್ಗಳನ್ನು ಸೀತೆ ದಿಟ್ಟಿಸಿದಳು ; ಸುಮ್ಮನಾದಳು.

ಸಿತೆ ಮತ್ತೆ ಮಾಮಿಯನ್ನು ನೆನಪಿಸಿಕೊಂಡಳು. ಒಳ ಹೋಗಿ ಮಾಮಿಯನ್ನು ನೋಡೋಣವೆಂದರೆ ಒಂಥರಾ ಭಯ. ದೊಡ್ಡ ದೊಡ್ಡ ಕೆತ್ತನೆಯ ಬಾಗಿಲುಗಳು, ಅಂದವಾಗಿ ಅಲಂಕರಿಸಿದ್ದ ಮೇಜು-ಕುರ್ಚಿಗಳು, ಕಾಲಿಟ್ಟರೆ ಸೊಯ್ಯನೆ ಜಾರುವ ನೆಲ.... ಆಕೆಗೆ ಕುಳಿತಲ್ಲಿಂದ ಕಾಲು ಕದಲಿಸಲು ಒಂಥರಾ ಭಯವಾಯ್ತು. ಜತೆಗೆ ಅಮ್ಮನ ಎಚ್ಚರಿಕೆ ಬೇರೆ ; ಸುಮ್ಮನಾದಳು.

ಸೀತೆಯ ಮನಸ್ಸೆಲ್ಲಾ ಒಳಕೋಣೆಯತ್ತಲೇ. ಆಗಾಗ ಮಾಮಿಯ ನೆನಪಿನ ಜತೆ ಕೋಳಿ ಮೊಟ್ಟೆಯೂ ನುಸುಳಿ ಬರುತ್ತಿತ್ತು. ರೇವತಿಯೂ ನೆನಪಿಗೆ ಬರುತ್ತಿದ್ದಳು. ಸೀತೆಯ ಗಮನ ಎಲ್ಲೋ ಇರಬೇಕಾದರೆ ಮಾಮಿ ಹೊರಬಂದಳು. ಅಬ್ಬಾ! -ಎಂದು ನೆಮ್ಮದಿಯ ನಿಟ್ಟುಸಿರು ಬಿಟ್ಟ ಗೋಪಾಲ.

ಸೀತೆಗೆ ಮಾಮಿಯನ್ನು ನೋಡಿ ಸಹಿಸಲಾರದಷ್ಟು ಸಂತಸವಾಗಿತ್ತು. 'ನಾನೊಮ್ಮೆ ಮಾಮಿಯನ್ನು ಮುಟ್ಟಿ ಬರಲಾ?' - ಎಂದು ಅಪ್ಪನಲ್ಲಿ ಗುಟ್ಟಾಗಿ ಕೇಳಿದಳು, 'ಬೇಡಾ, ಅವಳೇ ಇಲ್ಲಿ ಬಂದು ನಿನ್ನನ್ನು ತಬ್ಬಾಳೆ'- ಅಂದ ಗೋಪಾಲ. ಸೀತೆ ಸಾಕಷ್ಟು ಕಾದಳು. ಮಾಮಿ ಇತ್ತ ಕಡೆ ಬರುತ್ತಿಲ್ಲ ; ನಡುಮನೆಯಲ್ಲಿ ಕುಳಿತಿದ್ದ ಜರಿಸೀರೆ ಉಟ್ಟವರ ಬಳಿ ನಸುನಗುತ್ತಾ ಹರಟುತ್ತಿದ್ದಳು.

ಗೋಪಾಲನಿಗೂ ಕಸಿವಿಸಿಯಾಗುತ್ತಿತ್ತು. ಸೀತೆಗೆ ಮಾಮಿ ತನ್ನತ್ತ ಬರುತ್ತಿಲ್ವಲ್ಲಾ ?- ಎಂಬ ಅಸಹನೆ, ದುಃಖ ಹೆಚ್ಚುತ್ತಲೇ ಇತ್ತು. ಅಪ್ಪನನ್ನು ಪದೇ ಪದೇ 'ಹೋಗಲಾ, ಹೋಗಲಾ' - ಎಂದು ಕೇಳಿದಾಗ ಗೋಪಾಲ ಹೋಗೆಂದ.

ಸೀತೆ ಓಡಿ ಹೋಗಿ ಮಾಮಿಯನ್ನು ತಬ್ಬಿ ಹಿಡಿದಳು. ಜಾನಕಿ ಮುಖದಲ್ಲಿ ಯಾವುದೇ ಭಾವನೆಯನ್ನು ತೋರ್ಪಡಿಸದೆ, ''ಯಾವಾಗ್ಬಂದೆ ? ಅಪ್ಪನೆಲ್ಲಿ ?'' - ಎಂದು ಕೇಳಿದಾಗ, ಸೀತೆ ಅಪ್ಪನತ್ತ ಕೈ ತೋರಿಸಿದಳು. ಜಾನಕಿ ಅಣ್ಣನತ್ತ ಒಣನಗೆ ಬೀರಿ, ಸೀತೆಯಿಂದ ಬಿಡಿಸಿಕೊಂಡು -'ಈಗ ಬರುತ್ತೇನೆ'- ಎಂದು ಒಳ ತೆರಳಿದಳು.

ಸೀತೆಗೆ ಒಂಥರಾ ಅವಮಾನವಾದಂತಾಯಿತು. ಅಪ್ಪ ಬೇರೆ, 'ನಿನ್ನನ್ನು ಮಾಮಿ ತಬ್ಬಿಕೊಳ್ತಾಳೆ' ಅಂದಿದ್ದ. ಆಕೆ ತಬ್ಬಲೂ ಇಲ್ಲ, ದಬ್ಬಲೂ ಇಲ್ಲ. ತನ್ನಿಂದ ಬಿಡಿಸಿಕೊಂಡು ಒಳ ತೆರಳಿದ್ದು ಸೀತೆಗೆ ಸಹಿಸಲಾಗಲಿಲ್ಲ. ಓಡಿ ಬಂದು ಅಪ್ಪನ ತೊಡೆಯಲ್ಲಿ ಮುಖ ಮುಚ್ಚಿ ಅತ್ತಳು. ಗೋಪಾಲ ಅಸಹಾಯಕನಾಗಿ ನಿಟ್ಟುಸಿರು ಬಿಟ್ಟ.

ಗೋಪಾಲ ಮಗಳನ್ನು ಸಂತೈಸುತ್ತಿದ್ದ. 'ಮಾಮಿ ಮದುಮಗಳಾಗೋದಕ್ಕೆ ಒಳ ಹೋಗಿದ್ದು ; ತಲೆಗೆ ಹೂ ಜಲ್ಲಿ ಹಾಕ್ಕೊಂಡು, ಜರಿ ಸೀರೆ ಉಟ್ಕೊಂಡು, ಚಿನ್ನ ಇಟ್ಕೊಂಡು ಬಂದು ನಿನ್ನನ್ನು ಅಪ್ಪಿಕೊಂಡು ಫೋಟೋ ತೆಗೆಸಿಕೊಳ್ತಾಳೆ'- ಹೀಗೆ ಗೋಪಾಲ ಏನೇನು ಸಬೂಬು ಹೇಳಿದರೂ ಸೀತೆಗೆ ಸಮಾಧಾನವಿಲ್ಲ.

ಅಷ್ಟರಲ್ಲಿ ಗೋಪಾಲನ ದೊಡ್ಡ ತಂಗಿ ಸುಮತಿ ತನ್ನ ಮಗಳು, ಗಂಡನೊಡನೆ ಒಳ ಬಂದಳು. ಗೋಪಾಲನನ್ನು

ನೋಡಿದವಳೆ, ಅಣ್ಣನಿದ್ದಲಿಗೆ ಬಂದು ಸೀತೆಯನ್ನು ಅಪ್ಪಿಹಿಡಿದಳು.

ಸೀತೆಯ ಗಮನವೆಲ್ಲಾ ಸುಮತಿ ಮಾಮಿಯ ಮಗಳು ಶಾರದೆಯತ್ತ ತೆರಳಿತು. ಇಬ್ಬರೂ ಆಟವಾಡತೊಡಗಿದರು. ಗೋಪಾಲ ಸುಮತಿಯೊಡನೆ, ಜಾನಕಿಯನ್ನು ಹೆರಿಗೆಗೆ ತನ್ನಲ್ಲಿಗೆ ಕರೆದುಕೊಂಡು ಹೋಗುವುದೋ ? ಬಿಡುವುದು? - ಎಂಬ ಅಭಿಪ್ರಾಯ ಕೇಳಿದಾಗ ಸುಮತಿ - 'ಸುಮ್ಮಿರು ನಿಂಗ್ಯಾಕೆ ಉಸಾಬರಿ, ದೊಡ್ಡೋರಿಗೆಲ್ಲಾ ನಿನ್ನಂಥವರಿಂದ ಬಾಣಂತನ ಮಾಡಲು ಸಾಧ್ಯವಿಲ್ಲ. ಜಾನಕಿಯಲ್ಲಿ ಕೇಳಿ ಮುಖಭಂಗ ಮಾಡಿಸ್ಕೋಬೇಡಾ' -ಎಂದು ಗೋಪಾಲನಿಗೆ ಬುದ್ಧಿ ಹೇಳಿದಾಗ ಗೋಪಾಲ ಸುಮ್ಮನಾದ.

ಅಷ್ಟರಲ್ಲಿ ಜಾನಕಿಯ ನಾದಿನಿಯರು ಜಾನಕಿಗೆ ಅಲಂಕರಿಸಿ ಕೈ ಹಿಡಿದುಕೊಂಡು ಚಾವಡಿಗೆ ಕರೆತಂದಾಗ ಸುಮತಿಯ ಮಗಳು ಶಾರದೆ - 'ಚಿಕ್ಕಮ್ಮಾ' -ಎಂದು ಕೂಗಿದಳು. ಜಾನಕಿಗೆ ಕೇಳಿಸಲಿಲ್ಲ. ಸುಮತಿ ಮಗಳಿಗೆ ಗದರಿಸಿ ಬಾಯ್ಮುಚ್ಚುವಂತೆ ಸಂಜ್ಞೆ ಮಾಡಿದಳು.

ಜಾನಕಿಯ ತವರು ಕಡೆಯಿಂದ ಸೀಮಂತಕ್ಕೆ ಬಂದವರೆಂದರೆ ಸುಮತಿ ಮತ್ತು ಗೋಪಾಲನ ಕುಟುಂಬ ಮಾತ್ರ ; ಆ ಬಗ್ಗೆ ಜಾನಕಿಗೂ ಹೆಚ್ಚಿನ ಕಳಕಳಿಯಿರಲಿಲ್ಲ, ಬೇಸರವೂ ಇಲ್ಲ. ಜಾನಕಿಯ ನಾದಿನಿಯರು ಗರ್ಭಿಣಿಯನ್ನು ಕುರ್ಚಿಯಲ್ಲಿ ಕುಳ್ಳಿರಿಸಿ, ಆಕೆಯೆದುರಿಗೆ ಮೂರು ಕಾಲಿನ ಮುಕ್ಕಳಿಕೆಯೊಂದನ್ನಿಟ್ಟು, ಅದರಲ್ಲಿ ಗೆರಸೆಯಿರಿಸ 'ಬಯಕೆ' ಬಡಿಸಲಾರಂಭಿಸಿದರು. ಬುಟ್ಟಿ ಬುಟ್ಟಿ ಸಿಹಿತಿಂಡಿಗಳು ಒಳಕೋಣೆಯಿಂದ ಬರಲಾರಂಭಿಸಿದವು.

ಸೀತೆ, ಶಾರದೆ ಆಟವಾಡುತ್ತಿದ್ದವರು ತಿಂಡಿಯ ವಾಸನೆ ಮೂಗಿಗೆ ತಾಗುತ್ತಲೇ ಬಸಿರಿಯ ಸುತ್ತ ಸೇರಿದ್ದ ಹೆಂಗಸರತ್ತ ತಾವೂ ಓಡಿದರು. ಸುಮತಿ ತನ್ನ ಮಗಳನ್ನು ಓಡಿ ಬಂದು ಹಿಡಿದಿಟ್ಟರೆ, ಸೀತೆ ತಪ್ಪಿಸಿಕೊಂಡು ಜಾನಕಿಯ ಪಕ್ಕದಲ್ಲಿ ಹೋಗಿ ನಿಂತು ಬಿಟ್ಟಳು.

ಸೀತೆ ಮಾಮಿಯ ಅಲಂಕಾರವನ್ನೇ ಮಿಕಿ ಮಿಕಿ ದಿಟ್ಟಿಸಿದಳು. ತನ್ನ ಭಾಗೀರಥಿ ಟೀಚರ್‌ಗಿಂತ ಮಾಮಿಯೇ ತುಂಬಾ ಚೆಂದ ಎಂದು ಸೀತೆಗೆ ಅನಿಸಿತು. ಮಾಮಿ ತೊಟ್ಟಿದ್ದ ಬೇರೆ ಬೇರೆ ನಮೂನೆಯ ಆಭರಣಗಳನ್ನು ನೋಡಿದಾಗ ಅವಳಿಗೆ ಅಮ್ಮನ ಬೋಳು ಕೈ, ಕುತ್ತಿಗೆ ನೆನಪಾಯಿತು.

ಮಾಮಿಯ ಗಂಡ ಮಾಮಿಯ ಪಕ್ಕದಲ್ಲೇ ನಿಂತು, ಸಿಹಿತಿಂಡಿ 'ಹಾಗೆ ಬಡಿಸಿ-ಹೀಗೆ ಬಡಿಸಿ' ಎಂದು ಸೂಚನೆ ಕೊಡುತ್ತಿದ್ದ. ಸೀತೆ ಒಮ್ಮೆ ಅವನನ್ನು ನೋಡುತ್ತಾ ಮತ್ತೊಮ್ಮೆ ಅವನ ಬೆರಳುಗಳಲ್ಲಿ ಮಿಂಚುತ್ತಿದ್ದ ಉಂಗುರಗಳನ್ನು ನೋಡುತ್ತಾ..... ಕೆಲ ಕ್ಷಣ ಸಿಹಿತಿಂಡಿಯನ್ನೂ ಮರೆತಿದ್ದಳು; ಮಾಮಿಯನ್ನೂ ಮರೆತಿದ್ದಳು. ಸೀತೆಗೆ ಇದ್ದಕ್ಕಿದ್ದಂತೆ ತಟ್ಟನೆ ಕೋಳಿಮೊಟ್ಟೆಯ ನೆನಪಾಯ್ತು. ರೇವತಿಯ ಚಿಕ್ಕಮ್ಮನಿಗೆ ಸೀಮಂತದಲ್ಲಿ ಕೋಳಿಮೊಟ್ಟೆ ಬಡಿಸಿದ್ದು, ಅವಳದನ್ನು ರೇವತಿಗೆ ಕೊಟ್ಟಿದ್ದು.... ಎಲ್ಲಾ ನೆನಪಾಯ್ತು.

ಮಾಮಿಗೆ ಕೋಳಿಮೊಟ್ಟೆ ಇನ್ನೂ ಬಡಿಸಿರಲಿಲ್ಲ. ಸೀತೆ ಅದಕ್ಕಾಗಿ ಕಾಯುತ್ತಲೇ ಇದ್ದಳು. ಏನೇನೋ ಆಕಾರದ, ಬಣ್ಣದ, ವಿಚಿತ್ರ ಹೆಸರಿನ ಸಿಹಿತಿಂಡಿಗಳು ಮಾಮಿಯ ಗೆರಸೆಯನ್ನು ತುಂಬುತ್ತಿದ್ದವು. ಸೀತೆ ಅದುವರೆಗೂ ಕಾಣದಿದ್ದ ಅಷ್ಟೇಕೆ ಬೇಕರಿಯ ಕಾಮತರೂ ಕಾಣದಿದ್ದ ಸಿಹಿತಿಂಡಿಗಳು, ಮಾಮಿಯ ಗೆರಸೆಯನ್ನು ಅಲಂಕರಿಸುವುದನ್ನು ನೋಡಿ ಸೀತೆಗೆ ಬಾಯಿ ತುಂಬಾ ನೀರು; ಎಲ್ಲವನ್ನೂ ಅಪ್ಪಿಷ್ಟು ತಿಂದು ಬಿಡಬೇಕೆನ್ನುವ ಆಸೆ, ಚಪಲ. ಈ ನಡುವೆ ಕೋಳಿ ಮೊಟ್ಟೆಯ ಬಗ್ಗೆ ಆತಂಕ ಶುರುವಾಗಿತ್ತು. ಮಾಮಿಗೆ ಕೋಳಿಮೊಟ್ಟೆ ಯಾರೂ ಬಡಿಸುತ್ತಿಲ್ಲ ! ಸೀತೆ ಕೊರಳು ಚಾಚಿ ಸುತ್ತುಮುತ್ತ ಕಣ್ಣಾಡಿಸಿದಳು. ಅಲ್ಲಿದ್ದವರ ಕೈಲಿದ್ದ ಪಾತ್ರೆಯಲ್ಲಿ, ಬುಟ್ಟಿಯಲ್ಲಿ ಕೋಳಿಮೊಟ್ಟೆಗಳಿರಲಿಲ್ಲ. ಎಲ್ಲರೂ ಮಾಮಿಗೆ ಮತ್ತೆ ಮತ್ತೆ ಸಿಹಿತಿಂಡಿಯನ್ನೇ ತುಂಬುತ್ತಿದ್ದಾರೆ. ಸೀತೆಯ ತಾಳ್ಮೆ ತಪ್ಪಲಾರಂಭಿಸಿತು. ಕೋಳಿಮೊಟ್ಟೆ ಯಾರಾದರೂ ತರ ಬಹುದೇನೋ ? - ಎಂದು ಸುತ್ತ ಇಣುಕಿದಳು. ತರುವ ಯಾವ ಸೂಚನೆಯೂ ಕಾಣಿಸುತ್ತಿರಲಿಲ್ಲ. ಯಾರೂ ಅದರ ಹೆಸರನ್ನೂ ಉಸುರುತ್ತಿಲ್ಲ. ಸಿಹಿತಿಂಡಿಗಳ ರಾಶಿಯಲ್ಲಿ ಈಗ ಮಾಮಿಗೆ ಎದುರಿದ್ದವರು ಕಾಣಿಸುತ್ತಿರಲಿಲ್ಲ. ಬಡಿಸಿದ್ದ ಸಿಹಿತಿಂಡಿಗಳ ರಾಶಿ ಆಕೆಯ ತಲೆಯನ್ನು ದಾಟಿ ಮೇಲೆ ಹೋಗಿತ್ತು.

ಸಿಹಿತಿಂಡಿಗಳನ್ನು ಬಡಿಸಿಯಾದೊಡನೆ ಹಣ್ಣುಗಳ ಸರದಿ ಬಂತು. ಸೀತೆಯ ಎದೆ ಬಡಿತ ಹೆಚ್ಚುತ್ತಲೇ ಇತ್ತು. ಕೋಳಿ ಮೊಟ್ಟೆ ಸರದಿ ಇನ್ನೂ ಬಂದಿಲ್ಲ. ಅಷ್ಟರಲ್ಲಿ ಮಾಮಿಯ ಗಂಡ - 'ಹಣ್ಣು ಮುಗಿದೊಡನೆ ಕೋಳಿಮೊಟ್ಟೆ ತನ್ನಿ' - ಎಂದು ತನ್ನ ಭಾವನಿಗೆ ಆದೇಶಿಸಿದ. 'ಅಬ್ಬಾ' - ಎಂದು ನಿಟ್ಟುಸಿರು ಬಿಟ್ಟಳು ಸೀತೆ.

ಸೀತೆಗೆ ಸಂಭ್ರಮ ಶುರುವಾಗಿತ್ತು. ಮಾಮಿಗೆ ಹಣ್ಣು ಬಡಿಸಿಯಾಯ್ತು; ಇನ್ನು ಕೋಳಿಮೊಟ್ಟೆ ಮಾತ್ರ ಬಾಕಿ. ಸೀತೆ ಮತ್ತಷ್ಟು ಮಾಮಿಯತ್ತ ಸರಿದು ನಿಂತಳು. ಕೋಳಿಮೊಟ್ಟೆ ತರಲು ಒಳ ಹೋದಾತ ಇನ್ನೂ ಹೊರ ಬಂದಿರಲಿಲ್ಲ. ಸೀತೆಗೆ ಅವನನ್ನೂ ಕಚ್ಚಿ ಬಿಡುವಷ್ಟು ಸಿಟ್ಟು ಬರುತ್ತಿತ್ತು. ಮಾಮಿಯ ಗಂಡ -'ಯಾರಲ್ಲಿ ಕೋಳಿಮೊಟ್ಟೆ ತನ್ನಿ'- ಎಂದು ಮತ್ತೊಮ್ಮೆ ಗರ್ಜಿಸಿದಾಗ, ಬೇಯಿಸಿ ಸಿಪ್ಪೆ ಕಳಚಿದ್ದ ಕೋಳಿಮೊಟ್ಟೆ ತಕ್ಷಣ ಹೊರ ಬಂತು.

ಸೀತೆಗೆ ಮಾಮಿಯ ಗಂಡ ತುಂಬಾ ಒಳ್ಳೆಯವನಂತೆ ಕಂಡ. ಸ್ವರಕ್ಕೆ ಹೆದರಿ ಕೋಳಿಮೊಟ್ಟೆ ದಿಡೀರ್ ಹೊರಬಂದುದನ್ನು ನೋಡಿದರೆ ಆತ ತನ್ನ ಮಾಸ್ತ್ರಿಗಿಂತಲೂ ಜೋರಿನವರಿರಬೇಕು ಎಂದಂದು ಕೊಂಡಳು ಸೀತೆ.

ಮಾಮಿಗೆ ಕೊನೆಗೂ ಕೋಳಿಮೊಟ್ಟೆ ಬಡಿಸಿದರು. ಮೊಟ್ಟೆ ಕಂಡೊಡನೆ ಸೀತೆಯ ಬಾಯಲ್ಲಿ ನೀರೂರತೊಡಗಿತ್ತು. ಮಾಮಿಯ ಗಂಡ ನಗುತ್ತಾ 'ತಿನ್ನು.... ತಿನ್ನು' ಎಂದು ಒತ್ತಾಯಿಸುತ್ತಿದ್ದ ಮಾಮಿಗೆ. ಮಾಮಿಯ ಸುತ್ತ ನೆರೆದಿದ್ದವರು ಕೂಡಾ ಹಾಗೆಯೇ ಒತ್ತಾಯಿಸಿದರು, ಮಾಮಿ ತಿನ್ನುತ್ತಿಲ್ಲ; ನಾಚುತ್ತಿದ್ದಳು. ಅರೆ ! ನಮ್ಮ ಮನೇಲಿ ಗಬಕ್ಕನೇ ತಿನ್ನುತ್ತಿದ್ದ ಮಾಮಿಗೇನಾಗಿದೆ ? - ಎಂದು ಸೀತೆ ಅಚ್ಚರಿಪಟ್ಟಳು. ಮಾಮಿ ಗಂಡ ಮತ್ತೂ ಮತ್ತೂ ಒತ್ತಾಯಿಸಿ ಒಂದು ತುಂಡು ಹಲ್ವವನ್ನು ಅವಳ ಬಾಯಿಗಿಟ್ಟ, ಸುತ್ತಲಿದ್ದವರೆಲ್ಲಾ ನಕ್ಕರು. ಸೀತೆಯೂ ನಕ್ಕಳು.

ಜಾನಕಿ ಒಂದೆರಡು ತುಂಡು ಹಲ್ವ ತಿಂದು, ಕೋಳಿಮೊಟ್ಟೆಗೆ ಕೈಹಾಕಿದಳು. ಸೀತೆಯ ಎದೆ 'ಡವ ಡವಾಂತ' ಹೊಡೆಯಲಾರಂಭಿಸಿತು. 'ಮೊಟ್ಟೆಯನ್ನು ನಿಂಗಿಷ್ಟದ ಎರಡು ಮಕ್ಕಳಿಗೆ ಕೊಡು' - ಎಂದಳು ಮಾಮಿಯ ಹಿರಿಯ ನಾದಿನಿ ಮೆಲುವಾಗಿ. ಮಾಮಿ ತನ್ನ ಸುತ್ತಲೂ ಇರುವ ಮಕ್ಕಳನ್ನು ನೋಡತೊಡಗಿದಳು. ಸೀತೆ, ತನ್ನ ಇರವನ್ನು ಮಾಮಿಗೆ ಸ್ಪಷ್ಟಪಡಿಸಲು ಸ್ವಲ್ಪ ಸ್ವಲ್ಪವೇ ಸರಿದು ಬಂದು ಮಾಮಿಗೆ ತಾಗಿ ನಿಂತಳು.

ಜಾನಕಿಯ ವೀಕ್ಷಣೆ ಇನ್ನೂ ಮುಂದುವರಿದಿತ್ತು. ಸೀತೆ ತನ್ನನ್ನು ಮಾಮಿ ಒಮ್ಮೆ ನೋಡಲೆಂದು ಸೀತೆ ಹಂಬಲಿಸುತ್ತಿದ್ದಳು. ಜಾನಕಿ ಅಕ್ಕಪಕ್ಕಕ್ಕೆ ನೋಡದೆ ತನ್ನ ಮೂಗಿನ ನೇರಕ್ಕೇ ಎದುರು ನೋಡುತ್ತಿದ್ದಳು. ಗೆರಸೆಯಿಂದ ಮೊಟ್ಟೆಯೊಂದನ್ನು ತೆಗೆದು, ತನ್ನೆದುರು ನಿಂತಿದ್ದ ಕೆಂಪು ಜರಿಸೀರೆಯ ಹೆಂಗಸಿನ ಕೈಲಿದ್ದ ಮಗುವಿನ ಕೈಲಿಟ್ಟಳು. ಆ ಮಗು ಎಲ್ಲೋ ನೋಡುತ್ತಿತ್ತು. ಮೊಟ್ಟೆ ಕೈಗೆ ತಗಲಿದೊಡನೆ 'ಇಶ್ಶೀ' - ಎಂದೆನ್ನುತ್ತಾ ಮೊಟ್ಟೆಯನ್ನು ಜಾನಕಿಯತ್ತ ಮತ್ತೆ ಎಸೆದುಬಿಟ್ಟಿತು. ಮಗುವಿನ ತಾಯಿ - ''ಅವಳಿಗೆ ಮೊಟ್ಟೆ ಕಂಡ್ರೆ ಆಗಲ್ಲಾ, ನೀವು ಅವಳಿಗೆ ಕೊಟ್ಟಿದ್ದೀರಲ್ಲಾ'- ಅಂತ ಜಾನಕಿಯತ್ತ ಊರಗಲ ಬಾಯಿ ಮಾಡಿ ನಗುತ್ತಾ ಹೇಳಿದಾಗ, ಜಾನಕಿಯೂ ಪೆದ್ದು ಪೆದ್ದಗಿ ನಕ್ಕಳು.

ಮಗು ಎಸೆದ ಮೊಟ್ಟೆ ಜಾನಕಿಯ ಮೇಲೆ ಬೀಳುವುದು ಸ್ವಲ್ಪದರಲ್ಲೇ ತಪ್ಪಿ, ಆಕೆಯ ಪಕ್ಕದಲ್ಲೇ ನಿಂತಿದ್ದ ಸೀತೆಯ ಮೇಲೆ ಬಿದ್ದುಬಿಟ್ಟಿತ್ತು. ಸೀತೆ ಒಂದು ಕ್ಷಣ ಪೆಚ್ಚಾದಳು. ಆದರೂ ಒಂದೆಡೆ ಸಂತಸವಾಗಿತ್ತವಳಿಗೆ. ಜಾನಕಿ ಮೊಟ್ಟೆ ಯಾರ ಮೇಲೆ ಬಿತ್ತೆಂದು ನೋಡಲು ಪಕ್ಕಕ್ಕೆ ತಿರುಗಿದರೆ ಅಲ್ಲಿ ಸೀತೆ ನಿಂತಿದ್ದಳು. ಮೊಟ್ಟೆ ಬಿದ್ದಿದ್ದೂ ಸೀತೆಯ ಮೇಲಕ್ಕಾದುದರಿಂದ ಎಲ್ಲರೂ ಸೀತೆಯನ್ನೇ ನೋಡುತ್ತಿದ್ದರು. ಸೀತೆಗೆ ಒಳಗೊಳಗೆ ಸಂತಸ. ಈಗಲಾದರೂ ಮಾಮಿ ತನ್ನನ್ನು ನೋಡಿದಳಲ್ಲಾಂತ. ಮೊಟ್ಟೆ ಎಸೆದ ಮಗುವಿನ ಮೇಲೆ ಸೀತೆಗೆ ಬಹಳ ಕೋಪವು ಬಂದಿತ್ತು. 'ಯಾಕೆ ಎಸೆಯಬೇಕಿತ್ತು ? ಬೇಡದಿದ್ದರೆ ಹಿಂದಕ್ಕೆ ಕೊಡಬಾರದಿತ್ತೆ ?' -ಎಂಬ ಸಿಟ್ಟು ಒಂದೆಡೆ, ಇನ್ನೊಂದೆಡೆ ಇನ್ನೊಂದು ಮೊಟ್ಟೆಯನ್ನು ಮಾಮಿ ಯಾರಿಗೆ ಕೊಡಬಹುದು - ಎಂಬ ಕುತೂಹಲ.

ಮಾಮಿ ಮತ್ತೊಂದು ಮೊಟ್ಟೆಯನ್ನು ಕೈಲಿ ಹಿಡಿದುಕೊಂಡಳು. ಪಕ್ಕದಲ್ಲಿದ್ದ ಸೀತೆಯನ್ನು ಒಂದು ಬಾರಿ ನೋಡಿದಳು. 'ಇವಳೇನು ಮನೆಯೆದುರಿನ ಮಾಂಕು ಜೋಯಿಸನ ಹಾಗೆ ಮೊಟ್ಟೆ ಹಿಡಿದು ಮಂತ್ರ ಮಾಡ್ತಾಳೆ'- ಎಂದು ಸೀತೆಗೆ ಒಮ್ಮೆ ಅನಿಸದಿರಲಿಲ್ಲ. ಮಾಮಿ ಮತ್ತೆ ಪಕ್ಕಕ್ಕೆ ತಿರುಗಿದಳು. ಸೀತೆಗೆ ಸಂತಸ ತಡೆಯಲಾಗಲಿಲ್ಲ, ಮಾಮಿ ಮೊಟ್ಟೆ ತನಗೇ ಕೊಡುತ್ತಾಳೆ ಎಂದು ಹಿರಿ ಹಿರಿ ಹಿಗ್ಗಿದಳು.

ಜಾನಕಿ ದೂರದಲ್ಲಿ ನಿಂತಿದ್ದ ತನ್ನ ನಾದಿನಿಯ ಮಗಳನ್ನು ಕರೆದು ಆಕೆ ಬೇಡ ಬೇಡವೆಂದು ಕೊಸರಾಡಿದರೂ ಒತ್ತಾಯದಿಂದ ತಾನೇ ತಿನ್ನಿಸಿದಳು.

ಮೈಯೆಲ್ಲ ಆಸೆಗಣ್ಣಾಗಿ ನಿಂತಿದ್ದ ಸೀತೆ, ತಟ್ಟನೆ ತನ್ನ ಕಾಲಡಿ ಬಿದ್ದಿದ್ದ ಮೊಟ್ಟೆಯ ಮೇಲೆ ಕಾಲಿಟ್ಟು ಬಲವಾಗಿ ಹೊಸಕಿದಳು. ಸೀಮಂತದ 'ವೈಭವ'ವನ್ನು ಮತ್ತೆ ಸವಿಯಲಾಗದೆ ಅಪ್ಪನಿದ್ದಲಿಗೆ ಓಡಿಬಂದು, ಆತನ ತೊಡೆಯಲ್ಲಿ ಮುಖ ಮುಚ್ಚಿದಳು. 'ನೋಡಿದ್ಯಾ ಮಗಳೇ ಸೀಮಂತ' ಎಂದು ಅಪ್ಪ ಮಗಳ ಕೆನ್ನೆ ಹಿಂಡಿದ. ❑❑

## ರಾಷ್ಟ್ರಪಿತನ ಸ್ಮರಣೆಯೇ.....

## ..... ನಮ್ಮ ಧನ್ಯತೆಗೆ ಪ್ರೇರಣೆ.

ನಮ್ಮ

ತ್ಯಾಗ,

ಪರಿಶ್ರಮ,

ಪ್ರಾಮಾಣಿಕತೆ,

ಸತ್ಯ,

ಸಹಿಷ್ಣುತೆಗಳೊಂದಿಗೆ

ವಿಶ್ವಮಾನವ ಗಾಂಧೀಜಿಗೆ

ನಾವು ನಮಿಸೋಣ

**ಮೇಲಿವ ಅಮೂಲ್ಯ ಕೂಡುಗಗಳೇ ವಿಶ್ವಭ್ರಾತೃತ್ವಕ್ಕೆ ನಾಂದಿಯಾಗಲಿ.**



ಕರ್ನಾಟಕ ವಾರ್ತೆ.
Karnataka Information

# ನಿಮಗಿದು ಗೊತ್ತೇ ?

(1800ರಲ್ಲಿ ಡಾ. ಫ್ರಾನ್ಸಿಸ್ 'ಬುಕಾನನ್' ಎನ್ನುವ ಬ್ರಿಟಿಷ್ ಅಧಿಕಾರಿ ತಾನು ಕಂಡ ಬೆಂಗಳೂರಿನ ಸಮಗ್ರ ಚಿತ್ರಣವನ್ನು ನೀಡಿದ್ದಾನೆ. ಇದರಲ್ಲಿ ಶ್ರೀ ಸಾಮಾನ್ಯನ ಚರಿತ್ರೆಯೂ ಇದೆ).

1. 18ನೇ ಶತಮಾನ ಮತ್ತು 19ನೇ ಶತಮಾನದ ಆದಿಯಲ್ಲಿ ಸಂತೆಯಲ್ಲಿ ಎಲ್ಲ ಜಾತಿಯ ಹೆಂಗಸರೂ ಹತ್ತಿ ಖರೀದಿ ಮಾಡಿ, ಮನೆಯಲ್ಲಿ ನೂಲು ತಯಾರಿಸಿ ನೇಕಾರರಿಗೆ ಕೊಟ್ಟು ತಮಗೆ ಅಗತ್ಯವಿರುವ ಬಟ್ಟೆಯನ್ನು ನೇಯಿಸಿ ಕೊಳ್ಳುತ್ತಿದ್ದರು. ಉಳಿದ ಹೆಚ್ಚುವರಿ ನೂಲನ್ನು ಮಾರಿ ಹಣ ಸಂಪಾದಿಸುತ್ತಿದ್ದರು. ಮೇಲ್ವರ್ಗದ ಜಾತಿಯ ಹೆಂಗಸರು ಈ ರೀತಿ ನೂಲುತ್ತಿರಲಿಲ್ಲ. ಉಳಿದ ಎಲ್ಲ ಜಾತಿಯ ಮಹಿಳೆಯರೂ ಮನೆಯಲ್ಲೇ ಕುಳಿತು ನೂಲುವ ಕೆಲಸದಿಂದ ಸಾಕಷ್ಟು ಹಣಗಳಿಸುತ್ತಿದ್ದರು. ಇಡೀ ದಿನ ನೂಲುವ ಹೆಂಗಸಿಗೆ ಕೃಷಿ ಕಾರ್ಮಿಕನಷ್ಟೇ ಪ್ರತಿ ಫಲ ಸಿಗುತ್ತಿತ್ತು.

2. ಬೆಂಗಳೂರಿನಲ್ಲಿ 17, 18, 19ನೇ ಶತಮಾನದ ಆದಿಯಲ್ಲಿ ಅತ್ಯಂತ ಶ್ರೇಷ್ಠ ರೇಷ್ಮೆ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಇದನ್ನು ರಾಜಮನೆತನದ ಸ್ತ್ರೀಯರೂ, ಶ್ರೀಮಂತ ಸ್ತ್ರೀಯರೂ ಕೊಳ್ಳುತ್ತಿದ್ದರು. ಕಡಲ ಮುಖಾಂತರ ಈ ರೇಷ್ಮೆ ಬಟ್ಟೆ ಪರದೇಶಕ್ಕೂ ಆಮದಾಗುತ್ತಿತ್ತು. ಇಂಗ್ಲೇಂಡಿನ ಕೈಗಾರಿಕಾ ಕ್ರಾಂತಿಯನಂತರ ಬೆಂಗಳೂರಿಗೆ ರೇಷ್ಮೆ ವ್ಯವಹಾರ ಇನ್ನಿಲ್ಲದಂತೆ ನೆಲಕಚ್ಚಿತು.

3. ಭಾರತದಲ್ಲಿ ಗಂಡನು ವ್ಯಭಿಚಾರ ನಡೆಸಿದರೆ ವಿಚ್ಛೇದನವಾಗದು. ಗಂಡನ ನಿಷ್ಠಾ ಹೀನತೆಗೆ ಭಾರತದ ಮಹಿಳೆಗಿರುವ ಅಸ್ತ್ರ ಅವಳ ನಾಲಿಗೆಯೇ. ಈ ಶಸ್ತ್ರವನ್ನು ಅತಿಯಾಗಿ ಬಳಸಿದಾಗ ಗಂಡಸರು ಅವಳನ್ನು ಹೊಡೆದು ಆ ಶಸ್ತ್ರವನ್ನು ಬಗ್ಗಿಸುತ್ತಾರೆ.

4. 1840ರಲ್ಲಿ ಹುಡುಗಿಯರಿಗಾಗಿ ಒಂದು ಶಾಲೆಯನ್ನು ಶ್ರೀಮತು ಸ್ಯುಯೆಲ್ ಎನ್ನುವ ಆಂಗ್ಲ ಮಹಿಳೆ ಪ್ರಾರಂಭಿಸಿದರು. ಅದೇ ಈಗಿನ 'ಮಿತ್ರಾಲಯ ಶಾಲೆ'.

5. 17, 18, 19ನೇ ಶತಮಾನದ ಆದಿಯಲ್ಲಿ ಒಂದು ದುಷ್ಟ ಪದ್ಧತಿಯಿತ್ತು. ಅದನ್ನು 'ಸಮಯಾಚಾರ' ಎನ್ನುತ್ತಿದ್ದರು. ವ್ಯಭಿಚಾರ ಆಪಾದನೆಗೊಳಗಾದ ಸ್ತ್ರೀಯರನ್ನು ಸರಕಾರವೇ ಹರಾಜು ಹಾಕಿ ಬಂದ ಹಣವನ್ನು ಸರಕಾರಿ ಖಜಾನೆಗೆ ಕಟ್ಟುತ್ತಿದ್ದರು. 1834ರಲ್ಲಿ ಬೆಂಗಳೂರಿಗೆ ಕಮೀಷನರ್ ಆಗಿ ನೇಮಕ ಗೊಂಡ ಕಬ್ಬನ್ ಮಹಾಶಯ ಈ ಕ್ರೂರ ಪದ್ಧತಿಯನ್ನು ಪ್ರತಿ ಬಂಧಿಸಿದ.

6. 1842ರಲ್ಲಿ ಲಂಡನ್ ಮಿಷನ್ ಬಾಲಕಿಯರ ಬೋರ್ಡಿಂಗ್ ಸ್ಕೂಲ್ ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಲೂಯಿಸ್ ರೈಸ್‌ರ ತಾಯಿ ಜೇನ್ ರೈಸ್ ಇದರ ಸ್ಥಾಪಕಿ. ಐರೋಪ್ಯ ಮಕ್ಕಳ ಸಲುವಾಗಿ ಇದು ಪ್ರಾರಂಭಿಸಿದ್ದು.

7. 1863ರಲ್ಲಿ ಬೆಂಗಳೂರಿನಲ್ಲಿ ನೆಲೆನಿಂತ ಐರೋಪ್ಯ ಮಹಿಳೆಯರು, (ಸೈನಿಕ - ವಿಧವೆಯರು) ತಮಗಾಗಿ ಒಂದು ಪ್ರತ್ಯೇಕ ಲಘು ಪ್ರಕರಣಗಳ ನ್ಯಾಯಾಲಯ (ಸ್ಮಾಲ್ ಕಾಸಸ್ ಕೋರ್ಟ್) (ಅವರೇ ವಿನಂತಿಸಿಕೊಂಡದ್ದರಿಂದ) ಪ್ರಾರಂಭವಾಯಿತು. ಇವರೆಲ್ಲ ಬಡ್ಡಿ ವ್ಯವಹಾರದಲ್ಲಿ ತೊಡಗಿದ್ದರು. ಈ ಹಣಕಾಸು ವ್ಯವಹಾರ ಸ್ಥಳೀಯ ಮಹಿಳೆಯರಿಗೂ ಸಂಬಂಧಿಸಿತ್ತು.

8. 1870ರಲ್ಲಿ ಬೆಂಗಳೂರಿನಲ್ಲಿ ಬ್ರಹ್ಮ ಸಮಾಜ ಸ್ಥಾಪನೆಯಾಗಿ ಅದರ ಶಾಖೆಗಳು ಕಂಟೋನ್ಮೆಂಟ್ ಮತ್ತು ಪೇಟೆ ಪ್ರದೇಶದಲ್ಲಿ ಬೆಳೆದವು. ಇವರು ಆರಂಭಿಸಿದ ರಾವ್ ಬಹಾದ್ದೂರ್ ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್ ಶಾಲೆಗೆ (ಆರ್.ಬಿ.ಎ.ಎನ್.ಎಂ. ಶಾಲೆ) ಬಂಗಾಳದ ಬಿಪಿನ್ ಚಂದ್ರಪಾಲ್ ಪ್ರಿನ್ಸಿಪಾಲರಾಗಿದ್ದರು. ಬಾಲ್ಯ ವಿವಾಹ ವಿರೋಧ, ವಿಧವಾ ವಿವಾಹ, ಸ್ತ್ರೀ ಶಿಕ್ಷಣ, ಅಸ್ಪೃಶ್ಯತಾ ನಿವಾರಣೆ ಈ ಮುಂತಾದ ಸುಧಾರಣೆಗಳಿಗೆ ಈ ಸಮಾಜದಿಂದ ಚಾಲನೆ ಸಿಕ್ಕಿತು. ❑❑

# ಪುರುಷೋತ್ತಮನ ನೆನೆದು

-ಡಿ.ಸಿ. ಗೀತಾ

ಎಷ್ಟೋ ಕನಸುಗಳ ಹೆಣೆದರೂ
ಬಯಸಿದ್ದು ಮಾತ್ರ ಹಿಡಿಯಷ್ಟು ಪ್ರೀತಿ
ಕೈ ಹಿಡಿದವಳಿಗೆ ಒಂದು ಮಾತೂ ಹೇಳದೆ
ಕಾಡಿಗೆ ಹೊರಟು ನಿಂತಾಗ
ಕನಸ ಗೋಪುರ ಅಲ್ಲಾಡಿದ್ದು ಸುಳ್ಳಲ್ಲ.
ಕಲ್ಲು ಮುಳ್ಳಿನ ಕಾಡ ಹಾದಿಯ ನೆನೆದು
ಇನಿತೂ ಚಿಂತಿಸಲಿಲ್ಲ.

ಮಾತಿಗೆ ಬೆಲೆಯಿಲ್ಲವೆಂದರಿತಾಗ
ತಬ್ಬಿದ್ದು ಕಾಡ ಮೌನ
ಏನನ್ನೂ ಬೇಡಲಿಲ್ಲವಾದರೂ
ಹೇಗೋ ಕಣ್ಸೆಳೆದ ಮಾಯಾ ಜಿಂಕೆ!
ಅಗಲಿದವಳನ್ನು ಅರಸಿದನಾದರೂ
ನಿಜದ ಬಣ್ಣ ಬಯಲಾದದ್ದೇ ಆಗ!
ಕಾಡೊಳಗೆ ಧ್ಯಾನಸ್ಥ ಕುಳಿತಾಗಲೂ
ಹೊಳೆಯಲಿಲ್ಲ ಅಂತರಂಗ!

ಒಳಗೇ ಹಬೆಯಾಡುತ್ತಿದ್ದ ಅನುಮಾನದ ಹೊಗೆ
ತುಂಬು ಗರ್ಭಿಣಿಯೆಂಬುದು ಮರೆತೂ
ಧುತ್ತನೆಂದ್ದು ಬೆಂಕಿ ಕಾರಿದ್ದು ಆಕಸ್ಮಿಕವಲ್ಲ.
ಆತ್ಮ ಸಾಕ್ಷಿಗೆ ಬೆಂಕಿ ಬಿದ್ದರೂ
ಜನರ ಮಾತುಳಿಸಿ ದೇವರಾಗಬೇಕಿತ್ತಲ್ಲ!

ಬರಿ ನಿಟ್ಟುಸಿರನುಣಿಸಿ, ಕಣ್ಣೀರಲೇ
ಕೈ ತೊಳೆಸಿದ ಪುರುಷೋತ್ತಮನ ಬಗೆಗಿನ
ಕವಿ ವರ್ಣನೆಗೇನೂ ಕಮ್ಮಿಯಿಲ್ಲ.
ಜಗತ್ತಿಗಾತ  ಪುರುಷೋತ್ತಮನೇ!
ಅದೇ ಕವಿಗೆ ನಾನು
ಎಲ್ಲವ ಸಹಿಸಿದ ಸಹನಾಮಯಿ!
ಆಡಿದ್ದರಂತೂ ಜಗತ್ತಿಗೇ ಬಾಯಿ ಬಡುಕಿ
ಅನುಮಾನ ಪಿಶಾಚಿಗೆ ಇದ್ದ ಉತ್ತರವೊಂದೇ;
ದಿವ್ಯ ನಿರ್ಲಕ್ಷ್ಯ.

* * * *

ಮಣ್ಣ ಹುಡುಗಿ ಒಬ್ಬಂಟಿ ಕೂತು
ಬರೀ ನಿಟ್ಟುಸಿರ ಮಳೆಗರೆಯದೆ,
ಕಣ್ಣೀರಿಡದೆ, ಇನ್ನಾದರೂ
ಈ ಇಂಥ ರಾಮರಿಗೆ ಗುಡಿ ಕಟ್ಟುವ ಬದಲು
ನಿರ್ಲಕ್ಷ್ಯದ ಪಾಠ ಹೇಳಬೇಕಾಗಿದೆ.



# ಶೂನ್ಯವಾದವಳು

ಶೂನ್ಯವಾದವಳು [ಅನುವಾದ] ಡಾ। ವೆಂ. ವನಜ
ಮೂಲ : ವುಮನ್ ಅಟ್ ಪಾಯಿಂಟ್ ಜೀರೊ
ಲೇಖಕರು : ನವಲ್ ಎಲ್ ಸಾದವಿ
ಪ್ರ : ಮಾನಸ ಪ್ರಕಾಶನ, ಬೆಂಗಳೂರು.

ನವಲ್ ಎಲ್ ಸಾದವಿಯವರ 'ವುಮನ್ ಅಟ್ ಪಾಯಿಂಟ್ ಜೀರೋ'' ಕೃತಿಯ ಕನ್ನಡಾನುವಾದ 'ಶೂನ್ಯವಾದವಳು'. ಪರುಷನ ಕಾಮದಾಹಕ್ಕೆ ಬಲಿಯಾಗಿ ನಲುಗಿದ ಹೆಣ್ಣೊಬ್ಬಳ ಸತ್ಯಕತೆಯೆಂದು ಲೇಖಕಿಯೇ ಹೇಳಿಕೊಂಡಿದ್ದಾರೆ. ಈಜಿಪ್ಟಿನ ಖನತೀರ್ ಜೈಲಿನಲ್ಲಿ ಮರಣದಂಡನೆಯನ್ನು ಎದುರು ನೋಡುತ್ತಿದ್ದ ಖೈದಿ ಫಿರ್ದೋಸ್‌ಳನ್ನು ಸಂದರ್ಶಿಸಿ ಲೇಖಕಿ ಬರೆದ ಕತೆಯಿದು. ಈ ಪುಸ್ತಕ ಸಂಶೋಧಕಿಯೊಬ್ಬಳ ಅನ್ವೇಷಣಾ ಮನಸ್ಸಿನೊಂದಿಗೆ ಸೃಜನಶೀಲೆಯ ಮನುಷ್ಯ ಪ್ರೇಮವನ್ನು ಸಂವೇದನೆಯನ್ನು ಒಳಗೊಂಡಿದೆ. ಪುಸ್ತಕದ ಕೆಲವು ಸಾಲುಗಳೊಂದಿಗೆ, ಕೃತಿಯ ಪರಿಚಯವನ್ನು ಮಾಡಿಕೊಳ್ಳಬಹುದು.

''ನನಗೆ ಮಾತಾಡಲು ಬಿಡಿ. ನನನ್ನು ತಡೆಯಬೇಡಿ. ನೀವು ಹೇಳುವುದನ್ನು ಕೇಳುವಷ್ಟು ಸಮಯ ನನಗಿಲ್ಲ. ಇಂದು ಸಂಜೆ ಆರು ಗಂಟೆಗೆ ನನ್ನನ್ನು ಕರೆದೊಯ್ಯಲು ಬರುತ್ತಾರೆ. ನಾಳೆ ನಾನಿರುವುದಿಲ್ಲ. ಈ ಭೂಮಿಯ ಮೇಲಿರುವ ಯಾರಿಗೂ ಗೊತ್ತಿರದ ಸ್ಥಳಕ್ಕೆ ಪಯಣಿಸುತ್ತಿರುವುದು ನನಗೆ ಹೆಮ್ಮೆಯ ವಿಷಯ. ರಾಜರು, ರಾಜಕುಮಾರರು, ಆಡಳಿತ ನಡೆಸುವವರೆಲ್ಲರಿಗಿಂತ ಶ್ರೇಷ್ಠಳೆಂಬ ಭಾವನೆ ಬರುವಂಥದ್ದೇನನ್ನೋ ನನ್ನ ಬದುಕಿನುದ್ದಕ್ಕೂ ಹುಡುಕುತ್ತಾ ಬಂದಿದ್ದೆ. ಸಮಾಚಾರ ಪತ್ರಿಕೆಗಳನ್ನು ಕಂಡರೆ ಅವುಗಳ ಮೇಲೆ ಉಗುಳುತ್ತಿದ್ದೆ. ನಾನು ಉಗುಳುತ್ತಿದ್ದುದು ಪತ್ರಿಕೆಗಳ ಮೇಲೆಂದು ತಿಳಿದಿರುತ್ತಿತ್ತು. ಅಲ್ಲದೆ ಆ ಪತ್ರಿಕೆಗಳು ಅಡಿಗೆ ಮನೆಯ ಕಪಾಟುಗಳಿಗೆ ಹಾಕಲು ಬೇಕಾಗುತ್ತಿತ್ತು. ಆದರೂ ಉಗುಳುತ್ತಿದ್ದೆ ಅದನ್ನು ಹಾಗೇ ಒಣಗಲು ಬಿಡುತ್ತಿದ್ದೆ.

ಫೋಟೋಗಳ ಮೇಲೆ ಉಗುಳುವುದನ್ನು ಕಂಡವರು ಆ ಗಂಡಸು ನನಗೆ ಗೊತ್ತಿರುವವನೆಂದುಕೊಳ್ಳುತ್ತಿದ್ದರು. ಆದರೆ ಅವನು ಯಾರೆಂದು ನನಗೆ ಗೊತ್ತಿರುತ್ತಿರಲಿಲ್ಲ. ನಾನು ಕೇವಲ ಹೆಣ್ಣು. ಒಬ್ಬ ಹೆಣ್ಣಿಗೆ ಪತ್ರಿಕೆಗಳಲ್ಲಿ ತಮ್ಮ ಫೋಟೋಗಳನ್ನು ಹಾಕಿಸಿಕೊಳ್ಳುವ ಗಂಡಸರೆಲ್ಲರೂ ಗೊತ್ತಿರಲು ಸಾಧ್ಯವೇ ಇಲ್ಲ. ನಾನು ವೇಶ್ಯಾವೃತ್ತಿಯಲ್ಲಿ ಯಶಸ್ವಿಯಾದವಳು. ವೇಶ್ಯೆಯೊಬ್ಬಳು ತಾನೆಷ್ಟೇ ಯಶಸ್ವಿಯಾದವಳೆಂದುಕೊಂಡರೂ ಅವಳಿಗೆ ಎಲ್ಲ ಗಂಡಸರು ಗೊತ್ತಿರಲು ಸಾಧ್ಯವೇ ಇಲ್ಲ. ಅದೇನೇ ಇರಲಿ, ನನಗೆ ತಿಳಿದ ಪ್ರತಿಯೊಬ್ಬ ಗಂಡಸೂ ನನ್ನಲ್ಲೊಂದು ಆಸೆಯನ್ನು ಹುಟ್ಟಿಸುತ್ತಾನೆ. ಕೈಯೆತ್ತಿ ರಪ್ಪೆಂದು ಅವನ ಮುಖಕ್ಕೆ ಬಾರಿಸಬೇಕೆನ್ನುವುದೇ ಆಸೆ. ನಾನು ಹೆಣ್ಣೆಂಬ ಒಂದೇ ಕಾರಣದಿಂದ ಕೈಯೆತ್ತುವ ಧೈರ್ಯ ನನಗಾಗಿರಲಿಲ್ಲ''.




ಇಂತಹ ಹೆಣ್ಣು ಮಗಳೊಬ್ಬಳು ಕೊನೆಯಲ್ಲಿ ತನ್ನ ಸಂಪಾದನೆಯಲ್ಲಿ ಪಾಲು ಪಡೆಯಲು ಬಂದ ತಲೆ ಹಿಡುಕನೊಬ್ಬನನ್ನು ಕೊಲೆ ಮಾಡಲು ಮುಂದಾದಾಗ ಆಕೆಯೇ ಆತನನ್ನು ಕೊಲೆ ಮಾಡಿ ಮರಣದಂಡನೆಗೆ ಗುರಿಯಾಗುತ್ತಾಳೆ. ಈ ಕೃತಿಯು ಅನಾಥ ಹೆಣ್ಣು ಮಗಳೊಬ್ಬಳು ಪುರುಷ ಪ್ರಧಾನ ಸಮಾಜದ ವಿವಿಧ ಕ್ರೌರ್ಯಗಳಿಗೆ ತುತ್ತಾಗಿ ಎಂತೆಂತಹ ಯಾತನೆಯನ್ನನುಭವಿಸುತ್ತಾಳೆ ಎಂಬುದನ್ನು ಅತ್ಯಂತ ನವುರಾಗಿ, ಎಳೆ ಎಳೆಯಾಗಿ ನಮ್ಮ ಮುಂದೆ ಬಿಡಿಸಿಡುತ್ತದೆ.

''ಬದುಕಿನಲ್ಲಿ ಏನೂ ಸಾಧಿಸದೇ ಸೊನ್ನೆಯಾದವಳು ಎಂದು ಲೇಖಕಿ ಹೇಳಿದರೂ, ಕಥಾ ನಾಯಕಿ ಫಿರ್ದೋಸಾ ತನ್ನ ಬದುಕಿನಂತ್ಯದಲ್ಲಿ ಸೊನ್ನೆಗೂ ಮಹತ್ವವಿದೆ ಎಂಬುದನ್ನು ತೋರಿಸುತ್ತಾಳೆ'' ಎನ್ನುವ ತಸ್ಲೀಮ್ ತಾಜ್‌ರವರ ಮಾತು ಕೃತಿಯ ಮಹತ್ವವನ್ನು ಸೂಚಿಸುತ್ತದೆ. ಇಂತಹ ವಿಶಿಷ್ಟ ಅನುಭವವನ್ನು ಕನ್ನಡಕ್ಕೆ ಪರಿಚಯಿಸಿದ ಅನುವಾದಕಿ ಅಭಿನಂದನಾರ್ಹರು. ❑❑

**-ಅಚಲ**

CPMG/KA/BGS-8/2006-08 RNI No. 45577/88

*Posted at Basavanagudi P.O. On the 25/29th of every Month*

*February - 2006*

# ಸೂರ್ಯನ ಹಾದಿ ಕಾಯುತ್ತ

ಮಿನುಗುವ ನಕ್ಷತ್ರ
ನಿನ್ನ ಕಣ್ಣಿಂದ
ಉಬ್ಬಿ ಹೋದ ಬಾಲೆ
ಕಣ್ಣಂಚಲಿ ಮಿಂಚು

ಬೆಳದಿಂಗಳ ಸುರಿಸುತ್ತಾ
ಮೋಡಗಳ ನಡುವೆ
ಓಡುವ ಹುಣ್ಣಿಮೆ ಚಂದ್ರ
ನಿನ್ನ ಮುಖವೆಂದ
ಉಬ್ಬುಬ್ಬಿದ ಕೋಮಲೆ
ತುಟಿಯಂಚಲಿ ನಗು
ತುಟಿ ತೊಂಡೆ, ಹುಬ್ಬು ಕಾಮನ ಬಿಲ್ಲು
ನೀಳ ಜಡೆ, ದಾಳಿಂಬೆ ಹಲ್ಲು
ಮೂಗಂತೂ ಸಂಪಿಗೆ......
(ಕ್ಲೀಷೆಗೂ ಈಗ ನಾಚಿಕೆ)
ನೀನಿದ್ದರೆ ಬದುಕೆಲ್ಲವೂ ಹಸಿರು
ನೀನೇ ನನ್ನ ಉಸಿರು.....

ಕೇಳುತ್ತಾ ಕೇಳುತ್ತಾ
ಕ್ಲೀಷೆಗೆ ನಾಚುತ್ತಾ
'ಅದೇ ಮಿನುಗುವ ನಕ್ಷತ್ರ
ಬೆಳದಿಂಗಳ ಸುರಿಸುವ
ಪುಟ್ಟ ಚಂದ್ರಮ ಇಲ್ಲಿದ್ದಾನೆ'
ಎಂದವಳು
ಹೊಟ್ಟೆ ಮುಟ್ಟಿಕೊಂಡದ್ದೇ
ಬಣ್ಣಿಸುತ್ತಿದ್ದ ಕವಿ ಮಂಗಮಾಯ
ಅಮಾವಾಸ್ಯೆಯ ಚಂದ್ರನ ಹಾಗೆ !

ಮಿಂಚು, ನಕ್ಷತ್ರ, ಕತ್ತಲು, ಬೆಳದಿಂಗಳು.....
ಅಮಾವಾಸ್ಯೆಯ ರಾತ್ರಿ
ಮೋಡಗಳ ನಡುವೆ
ಸೂರ್ಯನ ಹಾದಿ ಕಾಯುತ್ತಿದ್ದಾಳೆ.

– ಡಿ.ಸಿ. ಗೀತಾ

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri